ಆದೇಶಿಸಿದ್ದೇನೆ. ಈ ಆದೇಶ ಹೊರಡಿಸಿದ 30 (ಮೂವತ್ತು) ದಿನಗಳ ಒಳಗಾಗಿ ಯಾರು ಈ ನ್ಯಾಯಾಲಯಕ್ಕೆ ಹಕ್ಕುಭಾಧ್ಯತೆ ಅರ್ಜಿ ಸಲ್ಲಿಸದೇ ಹೋದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ.

ಅಧಿಕೃತ ಅಧಿಕಾರಿ ಹಾಗೂ
ಉಪ ಅರಣ್ಯ ಸಂರಕ್ಷಣಾಧಿಕಾರಿ,
ಸಾಗರ ವಿಭಾಗ, ಸಾಗರ.

ಪಿ.ಆರ್.1156

**ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯದಲ್ಲಿ**

**ಬಿ3:ಅಮೊ:ವಾಹನ.ವಿವ. 29/09–10, ದಿನಾಂಕ:8ನೇ ಜುಲೈ, 2010**

**ಉಪಸ್ಥಿತರು:** ಶ್ರೀ ಮನೋಜ್ ಕುಮಾರ್ ತ್ರಿಪಾಠಿ, ಭಾ.ಅ.ಸೇ.,
ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ.

**ಪಿರ್ಯಾಧಿದಾರರು :** ವಲಯ ಅರಣ್ಯಾಧಿಕಾರಿ,
ಅಂಬ್ಲಿಗೊಳ ವಲಯ,
(ಮಾನ್ಯ ಸಹಾಯಕ ಸರ್ಕಾರಿ ಅಭಿಯೋಜಕರು, ಸಾಗರ)

**ಆರೋಪಿಗಳು:** ಪತ್ತೆಯಾಗಿರುವುದಿಲ್ಲ.

**ಭಾಧ್ಯತೆದಾರರು :** ಯಾರೂ ಹಕ್ಕುಬಾಧ್ಯತೆಯ ಅರ್ಜಿ ಸಲ್ಲಿಸಿಲ್ಲ.

**ಪ್ರಸ್ತಾವನೆ:**

ದಿ:22–10–2009 ರಂದು ಅಂಬ್ಲಿಗೊಳ ವಲಯದ, ಅಂಬ್ಲಿಗೊಳ ಶಾಖೆಯ ವನಪಾಲಕರು ಮತ್ತು ಸಿಬ್ಬಂದಿಯವರು ರಾತ್ರಿ ಗಸ್ತಿಗೆಂದು ಸಾಗರ ತಾ॥ ಆನಂದಪುರಂ ಹೋಬಳಿ ಕರಡಿಬೆಟ್ಟ ಮನ್ನಾ ಜಂಗ್ಲಿಯ ಡ್ಯಾಂ ಹೊಸೂರು ಮೇಲ್ಭಾದ ಸಾಗುವಾನಿ ನೆಡುತೋಪಿನ ಕಡೆ ಗಸ್ತು ಮಾಡುತ್ತಿರುವಾಗ ನೆಡುತೋಪಿನ ಕಡೆಯಿಂದ ಗಾಡಿ ರಸ್ತೆಯಲ್ಲಿ ಒಂದು ವಾಹನ ಬರುತ್ತಿರುವುದನ್ನು ಬ್ಯಾಟರಿ ಬೆಳಕಿನಿಂದ ನಿಲ್ಲಿಸಲು ಸೂಚಿಸಿದಾಗ, ವಾಹನವನ್ನು ನಿಲ್ಲಿಸದೆ ವೇಗವಾಗಿ ಮುಂದೆ ಬೋಳನಕಟ್ಟೆಗೆ ಹೋಗುವ PWD ರಸ್ತೆಯಲ್ಲಿ ಸುಮಾರು 50 ಮಿಟರ್ ದೂರ ಹೋಗಿ ಸಾಗುವಾನಿ ನೆಡುತೋಪಿನ ಹತ್ತಿರ ನಿಲ್ಲಿಸಿ, ವಾಹನದಲ್ಲಿದ್ದ ಆಸಾಮಿಗಳು ಓಡಲು ಪ್ರಾರಂಭಿಸಿದರು. ಅವರನ್ನು ಬೆನ್ನಟ್ಟಿದರು, ಕೈಗೆ ಸಿಗದೇ ಪರಾರಿಯಾಗಿರುತ್ತಾರೆ. ನಂತರ ಆಸಾಮಿಗಳು ಬಿಟ್ಟು ಹೋದ ವಾಹನವನ್ನು ಪರಿಶೀಲಿಸಿದಾಗ, ಅದು ಮಾರುತಿ ಓಮಿನಿ ನಂ: ಜಿಎ–01–ಜೆ–1073, ಛಾಸ್ಸಿಸ್ ನಂ: ST-91-IN-918430 ಇಂಜಿನ್ ನಂ: ಕಾಣಿಸುತ್ತಿಲ್ಲ. ಈ ವಾಹನದೊಳಗೆ 09 ಸಾಗುವಾನಿ ಹಸಿ ನಾಟಾ ಇದ್ದು, ಅವುಗಳ ಮೇಲೆ ಇಲಾಖಾ ಛಾಪಾದ ಗುರುತಿರಲಿಲ್ಲ. ಹಾಗೂ ಈ ತುಂಡುಗಳನ್ನು ಅಳತೆ ಮಾಡಿದಾಗ 09=0.577 ಎಂ3 ಪ್ರಮಾಣವಿದ್ದು, ಇದು ಅಕ್ರಮ ಸಾಗಾಣಿಕೆ ಎಂದು ಪರಿಗಣಿಸಿ ವಾಹನ ಮತ್ತು ಅರಣ್ಯ ಉತ್ಪನ್ನಗಳನ್ನು ಪ್ರಥಮ ವರ್ತಮಾನ ವರದಿ, ಮಹಜರ್ ವರದಿ, ಜಪ್ತು ವರದಿಯೊಂದಿಗೆ ಇಲಾಖಾ ಪರ ವಶಪಡಿಸಿಕೊಂಡು, ಕರ್ನಾಟಕ ಅರಣ್ಯ ಕಾಯ್ದೆ 1963 ಸೆಕ್ಷನ್ 24, 62, 71(ಎ) ಮತ್ತು ಕರ್ನಾಟಕ ಅರಣ್ಯ ಕಾನೂನು 1969ರ ಉಪನಿಯಮ 144, 165ರ ಪ್ರಕಾರ ಅಂಬ್ಲಿಗೊಳ ವಲಯದ ಅರಣ್ಯ ಮೊಕದ್ದಮೆ ಸಂಖ್ಯೆ:80/09–10ನ್ನು ದಾಖಲಿಸಿ, ವಾಹನವನ್ನು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ಸಮಕ್ಷಮ ಹಾಜರ್ಪಡಿಸಿರುತ್ತಾರೆ. ನಂತರ ಈ ವಾಹನವನ್ನು ಸರ್ಕಾರಿ ನಾಟಾ ಸಂಗ್ರಹಾಲಯದಲ್ಲಿರುವ ವಾಹನ ಶೆಡ್ಡಿನಲ್ಲಿ ಸುರಕ್ಷತೆಗಾಗಿ ಇಡಲು ವಲಯ ಅರಣ್ಯಾಧಿಕಾರಿ, ಸರ್ಕಾರಿ ನಾಟಾ ಸಂಗ್ರಹಾಲಯ, ಸಾಗರ ಇವರ ಸುಪರ್ಧಿಗೆ ಕೊಡಲು ದಿ:31–10–2009ರಂದು ಆದೇಶವಾಗಿದೆ.

ಈ ವಾಹನದ ಬಿ ವರದಿಯನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಲು The Director of Transport Commissioner, Panaji Goa, ಇವರಿಗೆ ನ್ಯಾಯಾಲಯದ ಪತ್ರ ಸಂ:ಬಿ3.ಅಮೊ.ವಾಹನ.29/09–10 ದಿ:30–10–2009 ರಂದು ಪತ್ರ ಬರೆದು ಕೋರಲಾಗಿದೆ. ಆದರೆ, ಇವರಿಂದ ಯಾವುದೇ ಮಾಹಿತಿ ಈ ನ್ಯಾಯಾಲಯಕ್ಕೆ ಒದಗಿಸಿರುವುದಿಲ್ಲ.

ಈ ನಡುವೆ ಈ ವಾಹನದ ಬಗ್ಗೆ ಹೆಚ್ಚಿನ ಪ್ರಚಾರಕ್ಕಾಗಿ ಈ ನ್ಯಾಯಾಲಯದಿಂದ 30 ದಿನಗಳ ಕಾಲಾವಕಾಶ ನೀಡಿ ಸಂಖ್ಯೆ: ಬಿ3:ಅಮೊ:ವಾಹನ: ಸಿಆರ್–37/09–10/ದಿ:05–12–2009 ರಂದು ಪ್ರಕಟಣೆಯನ್ನು ಹೊರಡಿಸಿ ಪ್ರತಿಯನ್ನು ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯ ಪತ್ರ ವಿಭಾಗ, ಸರ್ಕಾರಿ ಮುದ್ರಣಾಲಯ, ಬೆಂಗಳೂರು ಇವರಿಗೆ ಹಾಗೂ ನಿರ್ದೇಶಕರು, ವಾರ್ತಾ ಮತ್ತು ಪ್ರಚಾರ ಇಲಾಖೆ, ಬೆಂಗಳೂರು ಇವರಿಗೆ ಕಳುಹಿಸಿ ರಾಜ್ಯ ಮಟ್ಟದ ಪ್ರಚಲಿತ ದೈನಿಕ ಪತ್ರಿಕೆಯಲ್ಲಿ ಪ್ರಕಟಿಸಲು ಕೋರಲಾಗಿತ್ತು. ಅದರಂತೆ ಈ ಪ್ರಕಟಣೆಯು ದಿ:18–12–2009ರಂದು ವಿಜಯ ಕರ್ನಾಟಕ

ದಿನಪತ್ರಿಕೆಯಲ್ಲಿ ಮತ್ತು ದಿ:31–12–2009ರಂದು ರಾಜ್ಯ ಗೆಜೆಟ್ ಪತ್ರಿಕೆಯಲ್ಲಿ ಪ್ರಕಟಗೊಂಡು 30 ದಿನಗಳಾದರು ವಾಹನ ಮಾಲೀಕರಾಗಲೀ ಅಥವಾ ಅವರ ಪರ ವಕೀಲರಾಗಲೀ ಈ ನ್ಯಾಯಾಲಯಕ್ಕೆ ಹಕ್ಕುಬಾಧ್ಯತೆಯ ಅರ್ಜಿ ಸಲ್ಲಿಸಿರುವುದಿಲ್ಲ.

ಸಹಾಯಕ ಸರ್ಕಾರಿ ಅಭಿಯೋಜಕರು ದಿ:03–07–2010ರಂದು ವಾದ ಮಂಡಿಸಿ ಈ ವಾಹನದಲ್ಲಿ ಅರಣ್ಯ ಉತ್ಪನ್ನವನ್ನು ಕಳ್ಳ ಸಾಗಾಣಿಕೆ ಮಾಡುತ್ತಿರುವ ಸಮಯದಲ್ಲಿ ವಾಹನವನ್ನು ಅರಣ್ಯ ಉತ್ಪನ್ನದ ಸಮೇತ ವಲಯ ಅರಣ್ಯಾಧಿಕಾರಿ, ಅಂಬ್ಲಿಗೊಳ ವಲಯ, ಇವರು ಜಪ್ತುಮಾಡಿ, ಪ್ರಥಮ ವರ್ತಮಾನ ವರದಿ, ಜಪ್ತಿ ವರದಿ, ಮಹಜರ್ ವರದಿಯನ್ನು ಈ ನ್ಯಾಯಾಲಯಕ್ಕೆ ಹಾಜರ್ಪಡಿಸಿರುತ್ತಾರೆ. ಆದ್ದರಿಂದ ಈ ವಾಹನದಲ್ಲಿ ಅರಣ್ಯ ಉತ್ಪನ್ನ ಕಳ್ಳ ಸಾಗಾಣಿಕೆ ಮಾಡಿದ ಬಗ್ಗೆ ಸಾಬೀತಾಗಿದೆ. ಆದ್ದರಿಂದ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ.

ಈ ಪ್ರಕರಣದ ಎಲ್ಲಾ ದಾಖಲೆಗಳನ್ನು ಪರಿಶೀಲಿಸಿ, ಅಭಿಯೋಜಕರ ವಾದವನ್ನು ಕೇಳಿದೆ ಮತ್ತು ಈ ವಾಹನದ ಬಗ್ಗೆ ಪತ್ರಿಕಾ ಪ್ರಕಟಣೆ ಹೊರಡಿಸಿರುತ್ತದೆ. ಈ ಪ್ರಕಟಣೆಯು ರಾಜ್ಯ ಗೆಜೆಟ್‌ನಲ್ಲಿ ಪ್ರಕಟಗೊಂಡು 30 ದಿನಗಳಾದರೂ ಯಾರೂ ಹಕ್ಕು ಬಾಧ್ಯತೆಯ ಅರ್ಜಿಯನ್ನು ಈ ನ್ಯಾಯಾಲಯಕ್ಕೆ ಸಲ್ಲಿಸದೇ ಇದ್ದುದ್ದರಿಂದ ಈ ಪ್ರಕರಣದ ವಿದ್ಯಾಮಾನಗಳನ್ನು ಅರಿತು ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಆದೇಶ**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಶ್ರೀ ಮನೋಜ್ ಕುಮಾರ ತ್ರಿಪಾಠಿ, ಭಾ.ಅ.ಸೇ., ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಆದ ನಾನು, ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಎ) ರಿಂದ (ಜಿ) ಕಾಯಿದೆ ಪ್ರಕಾರ ವಲಯ ಅರಣ್ಯಾಧಿಕಾರಿ, ಅಂಬ್ಲಿಗೊಳ ವಲಯ, ಇವರು ಜಪ್ತು ಮಾಡಿದ ವಾಹನ ಮಾರುತಿ ಓಮಿನಿ ನಂ: ಜಿಎ–01–ಜೆ–1073, ಛಾಸ್ಸಿಸ್ ನಂ:ST-91-IN-918430 ಇಂಜಿನ್ ನಂ: ಕಾಣಿಸುತ್ತಿಲ್ಲ ಮತ್ತು ಈ ವಾಹನದಲ್ಲಿದ್ದ ಸಾಗುವಾನಿ ನಾಟಾ 9=0.577 ಎಂ3 ಕರ್ನಾಟಕ ಸರ್ಕಾರದ ಸಂಪತ್ತು ಆಗಿರುವುದರಿಂದ ಅಂತಿಮವಾಗಿ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಮುಟ್ಟುಗೋಲು ಹಾಕಿಕೊಂಡ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇ ಮಾಡಲು ಆದೇಶಿಸಿದ್ದೇನೆ. ಈ ಆದೇಶವನ್ನು ಹೇಳಿ ಬರೆಯಿಸಿ, ಗಣಕಯಂತ್ರದಲ್ಲಿ ಮುದ್ರಿಸಿ, ನಂತರ ಸರಿಪಡಿಸಿ ದಿ: 08–07–2010ರಂದು ನನ್ನ ಸಹಿ ಹಾಗೂ ಮೊಹರಿನೊಂದಿಗೆ ತೆರೆದ ನ್ಯಾಯಾಲಯದಲ್ಲಿ ಆದೇಶಿಸಿದ್ದೇನೆ. ಈ ಆದೇಶ ಹೊರಡಿಸಿದ 30 (ಮೂವತ್ತು) ದಿನಗಳ ಒಳಗಾಗಿ ಯಾರು ಈ ನ್ಯಾಯಾಲಯಕ್ಕೆ ಹಕ್ಕುಭಾಧ್ಯತೆ ಅರ್ಜಿ ಸಲ್ಲಿಸದೇ ಹೋದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ.

ಅಧಿಕೃತ ಅಧಿಕಾರಿ ಹಾಗೂ
ಪಿ.ಆರ್.1157 ಉಪ ಅರಣ್ಯ ಸಂರಕ್ಷಣಾಧಿಕಾರಿ,
ಸಾಗರ ವಿಭಾಗ, ಸಾಗರ.

**ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯದಲ್ಲಿ**
**ಬಿ3:ಅಮೊ:ವಾಹನ.ವಿವ–33/09–10, ದಿನಾಂಕ:8ನೇ ಜುಲೈ, 2010**

**ಉಪಸ್ಥಿತರು :** ಶ್ರೀ ಮನೋಜ್ ಕುಮಾರ್ ತ್ರಿಪಾಠಿ, ಭಾ.ಅ.ಸೇ.,
ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಣ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ.

**ಪಿರ್ಯಾಧಿದಾರರು :** ವಲಯ ಅರಣ್ಯಾಧಿಕಾರಿ,
ಅಂಬ್ಲಿಗೊಳ ವಲಯ,
(ಮಾನ್ಯ ಸಹಾಯಕ ಸರ್ಕಾರಿ ಅಭಿಯೋಜಕರು, ಸಾಗರ)

**ಆರೋಪಿಗಳು:** ಪತ್ತೆಯಾಗಿರುವುದಿಲ್ಲ.

**ಭಾದ್ಯತೆದಾರರು :** ಯಾರೂ ಹಕ್ಕುಬಾಧ್ಯತೆಯ ಅರ್ಜಿ ಸಲ್ಲಿಸಿಲ್ಲ.

**ಪ್ರಸ್ತಾವನೆ:**

ದಿ:13–11–2009 ರಂದು ಅಂಬ್ಲಿಗೊಳ ವಲಯದ, ಅಂಬ್ಲಿಗೊಳ ಶಾಖೆಯ ವನಪಾಲಕರು ಮತ್ತು ಸಿಬ್ಬಂದಿಯವರು ಶಿಕಾರಿಪುರ ತಾ॥ ಕಸಬಾ ಹೋಬಳಿ ಅಂಬ್ಲಿಗೊಳ ಗ್ರಾಮದಿಂದ ಕಣಸೋಗಿಗೆ ಹೋಗುವ ಮುಖ್ಯ ರಸ್ತೆಯಲ್ಲಿ ರಾತ್ರಿ ಗಸ್ತು ಮಾಡುತ್ತಿರುವಾಗ ಡ್ಯಾಂ ಹೊಸೂರು ಕಡೆಯಿಂದ ಒಂದು ವಾಹನ ಬರುತ್ತಿರುವುದನ್ನು ಅಂಬ್ಲಿಗೊಳ ವಲಯ ಕಛೇರಿಯ ಹತ್ತಿರ

ನಿಲ್ಲಿಸಲು ಸೂಚನೆ ನೀಡಿದಾಗ ವಾಹನವನ್ನು ನಿಲ್ಲಿಸದೆ ವೇಗವಾಗಿ ಮುಂದೆ ಓಡಿಸಿದಾಗ, ಇದನ್ನು ನೋಡಿದ ಇಲಾಖಾ ಸಿಬ್ಬಂದಿಗಳು ತಮ್ಮ ದ್ವಿಚಕ್ರ ವಾಹನಗಳಲ್ಲಿ ಬೆನ್ನಟ್ಟಿ, DBBL ಬಂದೂಕನ್ನು ತೋರಿಸಿದಾಗ ವಾಹನವನ್ನು ಸಿಬ್ಬಂದಿಗಳ ಮೇಲೆ ಓಡಿಸಲು ಬಂದಾಗ ಆಗ ಗಾಳಿಯಲ್ಲಿ ಎರಡು ಸುತ್ತು ಗುಂಡು ಹಾರಿಸಿದಾಗ ವಾಹನವನ್ನು ಅಲ್ಲೆ ಬಿಟ್ಟು ಚಾಲಕನು ಕೀಲಿಕೈ ತೆಗೆದುಕೊಂಡು ಚಾಲನ್ ಹಾರಿ ಕತ್ತಲೆಯಲ್ಲಿ ಓಡಿ ಪರಾರಿಯಾಗಿರುತ್ತಾನೆ. ನಂತರ ವಾಹನ ಪರಿಶೀಲಿಸಿದಾಗ ವಾಹನ ಮಾರುತಿ ವ್ಯಾನ್ ನಂ: ಜಿಎ–01–ಎಂ–2219, ಛಾಸ್ಸಿಸ್ ನಂ:ST-91-IN-842783, ಇಂಜಿನ್ ನಂ:17390 ಆಗಿದ್ದು, ವಾಹನದೊಳಗೆ ಸಾಗುವಾನಿ 8 ತುಂಡುಗಳಿದ್ದು, ಅದರ ಅಳತೆ ಮಾಡಿದಾಗ 0.525 ಎಂ3 ಪ್ರಮಾಣದ್ದು, ಈ ತುಂಡುಗಳು ಹಸಿಯಾಗಿದ್ದು, ಗರಗಸದಿಂದ ಕೊಯ್ತು ಮಾಡಿದಾಗಿದ್ದು, ಮತ್ತು ಈ ತುಂಡುಗಳ ಮೇಲೆ ಇಲಾಖಾ ಛಾಪಾದ ಗುರುತಿರಲಿಲ್ಲ. ಆದ್ದರಿಂದ ಇದು ಅಕ್ರಮ ಸಾಗಾಣಿಕೆ ಎಂದು ಪರಿಗಣಿಸಿ ಇಲಾಖಾ ಪಂಚರ ಸಮಕ್ಷಮ ವಾಹನ ಮತ್ತು ಸಾಗುವಾನಿ ತುಂಡುಗಳನ್ನು ಪ್ರಥಮ ವರ್ತಮಾನ ವರದಿ, ಮಹಜರ್ ವರದಿ, ಜಪ್ತು ವರದಿಯೊಂದಿಗೆ ಇಲಾಖಾ ಪರ ವಶಪಡಿಸಿಕೊಂಡು, ಕರ್ನಾಟಕ ಅರಣ್ಯ ಕಾಯ್ದೆ 1963 ಸೆಕ್ಷನ್ 24, 62, 71(ಎ) ಮತ್ತು ಕರ್ನಾಟಕ ಅರಣ್ಯ ಕಾನೂನು 1969ರ ಉಪನಿಯಮ 144, 165ರ ಪ್ರಕಾರ ಅಂಬ್ಲಿಗೊಳ ವಲಯದ ಅರಣ್ಯ ಮೊಕದ್ದಮೆ ಸಂಖ್ಯೆ:90/09–10ನ್ನು ದಾಖಲಿಸಿ, ವಾಹನವನ್ನು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ಸಮಕ್ಷಮ ಹಾಜರ್ಪಡಿಸಿರುತ್ತಾರೆ. ನಂತರ ಈ ವಾಹನವನ್ನು ಸರ್ಕಾರಿ ನಾಟಾ ಸಂಗ್ರಹಾಲಯದಲ್ಲಿರುವ ವಾಹನ ಶೆಡ್ಡಿನಲ್ಲಿ ಸುರಕ್ಷತೆಗಾಗಿ ಇಡಲು ವಲಯ ಅರಣ್ಯಾಧಿಕಾರಿ, ಸರ್ಕಾರಿ ನಾಟಾ ಸಂಗ್ರಹಾಲಯ, ಸಾಗರ ಇವರ ಸುಪರ್ಧಿಗೆ ಕೊಡಲು ದಿ:12–11–2009ರಂದು ಆದೇಶವಾಗಿದೆ.

ಈ ವಾಹನದ ಬಿ ವರದಿಯನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಲು ಸಾರಿಗೆ ಅಧಿಕಾರಿ ಗೋವಾ, ಇವರಿಗೆ ನ್ಯಾಯಾಲಯದ ಪತ್ರ ಸಂ:ಬಿ3.ಅಮೊ.ವಾಹನ.33/09–10 ದಿ:25–11–2009 ರಂದು ಪತ್ರ ಬರೆದು ಕೋರಿದಂತೆ ಸಾರಿಗೆ ಅಧಿಕಾರಿ ಗೋವಾ ಇವರು ಈ ವಾಹನದ "ಬಿ" ವಹಿಯನ್ನು ದಿ:09–12–2009 ರಂದು ಈ ನ್ಯಾಯಾಲಯಕ್ಕೆ ಒದಗಿಸಿರುತ್ತಾರೆ. ಈ "ಬಿ" ವಹಿಯಲ್ಲಿ ಆರ್.ಸಿ. ಮಾಲೀಕರ ಹೆಸರು Sri. Deelip Redkar, Sataraxet, Aldona Bardez, Goa ಎಂದು ನಮೂದಿಸಿದ್ದು, ಇವರಿಗೆ ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಬಿ)(1)ರ ಪ್ರಕಾರ ಈ ವಾಹನದ ದಾಖಲೆಗಳೊಂದಿಗೆ ನಿಮ್ಮ ಉತ್ತರವನ್ನು ಈ ನ್ಯಾಯಾಲಯಕ್ಕೆ 30 ದಿನದೊಳಗೆ ಸಲ್ಲಿಸಲು ತಿಳಿಸಿದೆ. ಇಲ್ಲವಾದಲ್ಲಿ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದೆಂದು ದಿ:26–03–2010 ರಂದು ನೋಟಿಸ್‌ನ್ನು ಜಾರಿ ಮಾಡಿದ್ದು, ಅವರಿಂದ ಯಾವುದೇ ಉತ್ತರ ಇಲ್ಲಿಯವರೆಗೆ ಬಂದಿರುವುದಿಲ್ಲ.

ಈ ನಡುವೆ ಈ ವಾಹನದ ಬಗ್ಗೆ ಹೆಚ್ಚಿನ ಪ್ರಚಾರಕ್ಕಾಗಿ ಈ ನ್ಯಾಯಾಲಯದಿಂದ 30 ದಿನಗಳ ಕಾಲಾವಕಾಶ ನೀಡಿ ಸಂಖ್ಯೆ:ಬಿ3:ಅಮೊ:ವಾಹನ:ಸಿಆರ್–37/09–10/ದಿ:05–12–2009ರಂದು ಪ್ರಕಟಣೆಯನ್ನು ಹೊರಡಿಸಿ ಪ್ರತಿಯನ್ನು ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯ ಪತ್ರ ವಿಭಾಗ, ಸರ್ಕಾರಿ ಮುದ್ರಣಾಲಯ, ಬೆಂಗಳೂರು ಇವರಿಗೆ ಹಾಗೂ ನಿರ್ದೇಶಕರು, ವಾರ್ತಾ ಮತ್ತು ಪ್ರಚಾರ ಇಲಾಖೆ, ಬೆಂಗಳೂರು ಇವರಿಗೆ ಕಳುಹಿಸಿ ರಾಜ್ಯ ಮಟ್ಟದ ಪ್ರಚಲಿತ ದೈನಿಕ ಪತ್ರಿಕೆಯಲ್ಲಿ ಪ್ರಕಟಿಸಲು ಕೋರಲಾಗಿತ್ತು. ಅದರಂತೆ ಈ ಪ್ರಕಟಣೆಯು ದಿ:18–12–2009ರಂದು ವಿಜಯ ಕರ್ನಾಟಕ ದಿನಪತ್ರಿಕೆಯಲ್ಲಿ ಮತ್ತು ದಿ:31–12–2009ರಂದು ರಾಜ್ಯ ಗೆಜೆಟ್ ಪತ್ರಿಕೆಯಲ್ಲಿ ಪ್ರಕಟಗೊಂಡು 30 ದಿನಗಳಾದರು ವಾಹನ ಮಾಲೀಕರಾಗಲೀ ಅಥವಾ ಅವರ ಪರ ವಕೀಲರಾಗಲೀ ಈ ನ್ಯಾಯಾಲಯಕ್ಕೆ ಹಕ್ಕುಬಾಧ್ಯತೆಯ ಅರ್ಜಿ ಸಲ್ಲಿಸಿರುವುದಿಲ್ಲ.

ಸಹಾಯಕ ಸರ್ಕಾರಿ ಅಭಿಯೋಜಕರು ದಿ:03–07–2010ರಂದು ವಾದ ಮಂಡಿಸಿ ಈ ವಾಹನದಲ್ಲಿ ಅರಣ್ಯ ಉತ್ಪನ್ನವನ್ನು ಕಳ್ಳ ಸಾಗಾಣಿಕೆ ಮಾಡುತ್ತಿರುವ ಸಮಯದಲ್ಲಿ ವಾಹನವನ್ನು ಅರಣ್ಯ ಉತ್ಪನ್ನದ ಸಮೇತ ವಲಯ ಅರಣ್ಯಾಧಿಕಾರಿ, ಅಂಬ್ಲಿಗೊಳ ವಲಯ, ಇವರು ಜಪ್ತುಮಾಡಿ, ಪ್ರಥಮ ವರ್ತಮಾನ ವರದಿ, ಜಪ್ತಿ ವರದಿ, ಮಹಜರ್ ವರದಿಯನ್ನು ಈ ನ್ಯಾಯಾಲಯಕ್ಕೆ ಹಾಜರ್ಪಡಿಸಿರುತ್ತಾರೆ. ಆದ್ದರಿಂದ ಈ ವಾಹನದಲ್ಲಿ ಅರಣ್ಯ ಉತ್ಪನ್ನ ಕಳ್ಳ ಸಾಗಾಣಿಕೆ ಮಾಡಿದ ಬಗ್ಗೆ ಸಾಬೀತಾಗಿದೆ. ಆದ್ದರಿಂದ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ.

ಈ ಪ್ರಕರಣದ ಎಲ್ಲಾ ದಾಖಲೆಗಳನ್ನು ಪರಿಶೀಲಿಸಿ, ಅಭಿಯೋಜಕರ ವಾದವನ್ನು ಕೇಳಿದೆ ಮತ್ತು ಈ ವಾಹನದ ಬಗ್ಗೆ ಪತ್ರಿಕಾ ಪ್ರಕಟಣೆ ಹೊರಡಿಸಿರುತ್ತದೆ. ಈ ಪ್ರಕಟಣೆಯು ರಾಜ್ಯ ಗೆಜೆಟ್‌ನಲ್ಲಿ ಪ್ರಕಟಗೊಂಡು 30 ದಿನಗಳಾದರೂ ಯಾರೂ ಹಕ್ಕು

ಬಾಧ್ಯತೆಯ ಅರ್ಜಿಯನ್ನು ಈ ನ್ಯಾಯಾಲಯಕ್ಕೆ ಸಲ್ಲಿಸದೇ ಇದ್ದುದ್ದರಿಂದ ಈ ಪ್ರಕರಣದ ವಿದ್ಯಾಮಾನಗಳನ್ನು ಅರಿತು ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಆದೇಶ**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಶ್ರೀ ಮನೋಜ್ ಕುಮಾರ ತ್ರಿಪಾಠಿ, ಭಾ.ಅ.ಸೇ., ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಆದ ನಾನು, ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಎ) ರಿಂದ (ಜಿ) ಕಾಯಿದೆ ಪ್ರಕಾರ ವಲಯ ಅರಣ್ಯಾಧಿಕಾರಿ, ಅಂಬ್ಲಿಗೊಳ ವಲಯ, ಇವರು ಜಪ್ತು ಮಾಡಿದ ವಾಹನ ಮಾರುತಿ ವ್ಯಾನ್ ನಂ: ಜಿಎ–01–ಎಂ–2219, ಛಾಸ್ಸಿಸ್ ನಂ:ST-91-IN-842783 ಇಂಜಿನ್ ನಂ: 17390 ಮತ್ತು ಈ ವಾಹನದಲ್ಲಿದ್ದ ಸಾಗುವಾನಿ ನಾಟಾ 08=0.525 ಎಂ3 ಕರ್ನಾಟಕ ಸರ್ಕಾರದ ಸಂಪತ್ತು ಆಗಿರುವುದರಿಂದ ಅಂತಿಮವಾಗಿ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಮುಟ್ಟುಗೋಲು ಹಾಕಿಕೊಂಡ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇ ಮಾಡಲು ಆದೇಶಿಸಿದ್ದೇನೆ. ಈ ಆದೇಶವನ್ನು ಹೇಳಿ ಬರೆಯಿಸಿ, ಗಣಕಯಂತ್ರದಲ್ಲಿ ಮುದ್ರಿಸಿ, ನಂತರ ಸರಿಪಡಿಸಿ ದಿ:08–07–2010ರಂದು ನನ್ನ ಸಹಿ ಹಾಗೂ ಮೊಹರಿನೊಂದಿಗೆ ತೆರೆದ ನ್ಯಾಯಾಲಯದಲ್ಲಿ ಆದೇಶಿಸಿದ್ದೇನೆ. ಈ ಆದೇಶ ಹೊರಡಿಸಿದ 30 (ಮೂವತ್ತು) ದಿನಗಳ ಒಳಗಾಗಿ ಯಾರು ಈ ನ್ಯಾಯಾಲಯಕ್ಕೆ ಹಕ್ಕುಭಾಧ್ಯತೆ ಅರ್ಜಿ ಸಲ್ಲಿಸದೇ ಹೋದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ.

ಅಧಿಕೃತ ಅಧಿಕಾರಿ ಹಾಗೂ
ಉಪ ಅರಣ್ಯ ಸಂರಕ್ಷಣಾಧಿಕಾರಿ,
ಸಾಗರ ವಿಭಾಗ, ಸಾಗರ.

ಪಿ.ಆರ್.1158

**ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ, ಇವರ ನ್ಯಾಯಾಲಯದಲ್ಲಿ**
**ಬಿ3:ಅಮೊ:ವಾಹನ.ವಿವ.–23/09–10, ದಿನಾಂಕ:8ನೇ ಜುಲೈ, 2010**

**ಉಪಸ್ಥಿತರು :** ಶ್ರೀ ಮನೋಜ್ ಕುಮಾರ್ ತ್ರಿಪಾಠಿ, ಭಾ.ಅ.ಸೇ.,
ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ.

**ಪಿರ್ಯಾಧಿದಾರರು :** ವಲಯ ಅರಣ್ಯಾಧಿಕಾರಿ,
ಶಿಕಾರಿಪುರ ವಲಯ, (ಮಾನ್ಯ ಸಹಾಯಕ ಸರ್ಕಾರಿ ಅಭಿಯೋಜಕರು, ಸಾಗರ)

**ಆರೋಪಿಗಳು :** ಪತ್ತೆಯಾಗಿರುವುದಿಲ್ಲ.

**ಭಾದ್ಯತೆದಾರರು :** ಯಾರೂ ಹಕ್ಕುಬಾಧ್ಯತೆಯ ಅರ್ಜಿ ಸಲ್ಲಿಸಿಲ್ಲ.

**ಪ್ರಸ್ತಾವನೆ:**

ದಿನಾಂಕ:29–09–2009 ರಂದು ಶಿಕಾರಿಪುರ ವಲಯದ, ಹಾರೋಗೊಪ್ಪ ಶಾಖೆಯ ವನಪಾಲಕರು ಮತ್ತು ಸಿಬ್ಬಂದಿಯವರು ಶಿಕಾರಿಪುರ ತಾಲ್ಲೂಕು ಗಂಗವ್ವನಸರ ಮನ್ನಾ ಜಂಗ್ಲಿಯ ಹಾರೋಗೊಪ್ಪ ಸ.ನಂ. 12 ರಲ್ಲಿ ಗಸ್ತು ಮಾಡುತ್ತಿರುವಾಗ ಒಂದು ವಾಹನದಲ್ಲಿ ನಾಟಾಗಳನ್ನು ತುಂಬುತ್ತಿರುವುದನ್ನು ಮಬ್ಬುಗತ್ತಲೆಯಲ್ಲಿ ಕಂಡುಬಂದಿತು. ಇಲಾಖೆಯವರು ಹತ್ತಿರ ಹೋಗುತ್ತಿದ್ದಾಗ ಅಲ್ಲಿದ ಆಸಾಮಿಗಳು ಇಲಾಖೆಯವರನ್ನು ಕಂಡು ವಾಹನವನ್ನು ವೇಗವಾಗಿ ಓಡಿಸಿದರು. ಇಲಾಖಾ ವಾಹನದಿಂದ ಬೆನ್ನಟ್ಟಿ ಭದ್ರಾಪುರ ಗ್ರಾಮದ ಭೋವಿ ಕಾಲೋನಿಯಲ್ಲಿ ನಿಲ್ಲಿಸಿ, ಆಸಾಮಿಗಳು ಓಡಿ ಪರಾರಿಯಾಗಿರುತ್ತಾರೆ. ಮುಂದುವರೆದು ವಾಹನವನ್ನು ಪರಿಶೀಲಿಸಿ ನೋಡಲಾಗಿ ಮಾರುತಿ ಓಮ್ನಿ ಕೆಎ–28–ಎಂ–2331, ಛಾಸ್ಸಿಸ್ ನಂ: 144520 ಇಂಜಿನ್ ನಂ: 209569 ಆಗಿದ್ದು, ವಾಹನದೊಳಗೆ ಸಾಗುವಾನಿ 7 ತುಂಡುಗಳಿದ್ದು, ಅದನ್ನು ಅಳತೆ ಮಾಡಿದಾಗ 0.445 ಎಂ3 ಪ್ರಮಾಣವಿದ್ದು, ಈ ತುಂಡಗಳ ಮೇಲೆ ಇಲಾಖಾ ಛಾಪಾದ ಗುರುತಿರಲಿಲ್ಲ. ಅಕ್ರಮ ಸಾಗಾಣಿಕೆ ಎಂದು ಪರಿಗಣಿಸಿ ವಾಹನ ಮತ್ತು ಅರಣ್ಯ ಉತ್ಪನ್ನಗಳನ್ನು ಪ್ರಥಮ ವರ್ತಮಾನ ವರದಿ, ಮಹಜರ್ ವರದಿ, ಜಪ್ತು ವರದಿಯೊಂದಿಗೆ ಇಲಾಖಾ ಪರ ವಶಪಡಿಸಿಕೊಂಡು, ಕರ್ನಾಟಕ ಅರಣ್ಯ ಕಾಯ್ದೆ 1963 ಸೆಕ್ಷನ್ 24, 62, 71 (ಎ) ರಿಂದ (ಜಿ), ಮತ್ತು ಕರ್ನಾಟಕ ಅರಣ್ಯ ಕಾನೂನು 1969ರ ಉಪನಿಯಮ 144, 163, 165ರ ಪ್ರಕಾರ ಶಿಕಾರಿಪುರ ವಲಯದ ಅರಣ್ಯ ಮೊಕದ್ದಮೆ ಸಂಖ್ಯೆ:29/09–10ನ್ನು ದಾಖಲಿಸಿ, ವಾಹನವನ್ನು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ಸಮಕ್ಷಮ ಹಾಜರ್ಪಡಿಸಿರುತ್ತಾರೆ. ನಂತರ ಈ ವಾಹನವನ್ನು ಸರ್ಕಾರಿ ನಾಟಾ

ಸಂಗ್ರಹಾಲಯದಲ್ಲಿರುವ ವಾಹನ ಶೆಡ್ಡಿನಲ್ಲಿ ಸುರಕ್ಷತೆಗಾಗಿ ಇಡಲು ವಲಯ ಅರಣ್ಯಾಧಿಕಾರಿ, ಸರ್ಕಾರಿ ನಾಟಾ ಸಂಗ್ರಹಾಲಯ, ಸಾಗರ ಇವರ ಸುಪರ್ಧಿಗೆ ಕೊಡಲು ದಿ:29–09–2009ರಂದು ಆದೇಶವಾಗಿದೆ.

ಈ ವಾಹನದ ಬಿ ವರದಿಯನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಲು ಸಾರಿಗೆ ಅಧಿಕಾರಿ ಬಿಜಾಪುರ ಇವರಿಗೆ ನ್ಯಾಯಾಲಯದ ಪತ್ರ ಸಂ:ಬಿ3.ಅಮೊ.ವಾಹನ.23/09–10 ದಿ:30–10–2009 ರಂದು ಪತ್ರ ಬರೆದು ಕೋರಿದಂತೆ ಸಾರಿಗೆ ಅಧಿಕಾರಿ ಬಿಜಾಪುರ ಇವರು ಈ ವಾಹನದ ಸಿ.ಸಿ. ಯನ್ನು ದಿ:13–10–1999ರಲ್ಲಿ ಪ್ರಾದೇಶಿಕ ಸಾರಿಗೆ, ಅಧಿಕಾರಿ ಧಾರವಾಡ ಇವರಿಗೆ ವರ್ಗಾಯಿಸಿದ ಬಗ್ಗೆ ದಿ:02–12–2009 ರ ಪತ್ರದಲ್ಲಿ ತಿಳಿಸಿರುತ್ತಾರೆ. ಅದರಂತೆ ಈ ವಾಹನದ ಬಿ ಪ್ರತಿಯನ್ನು ಒದಗಿಸಲು ಪ್ರಾದೇಶಿಕ ಸಾರಿಗೆ ಅಧಿಕಾರಿ, ಧಾರವಾಡ ಇವರಿಗೆ ದಿ:19–12–2009 ಮತ್ತು 11–03–2010 ರಂದು ಪತ್ರ ಬರೆದು ಕೋರಲಾಗಿತ್ತು. ಆದರೆ, ಇಲ್ಲಿಯವರೆಗೂ ಈ ವಾಹನ ಬಿ ಪ್ರತಿಯನ್ನು ಈ ನ್ಯಾಯಾಲಯಕ್ಕೆ ಒದಗಿಸಿರುವುದಿಲ್ಲ.

ಈ ನಡುವೆ ಈ ವಾಹನದ ಬಗ್ಗೆ ಹೆಚ್ಚಿನ ಪ್ರಚಾರಕ್ಕಾಗಿ ಈ ನ್ಯಾಯಾಲಯದಿಂದ 30 ದಿನಗಳ ಕಾಲಾವಕಾಶ ನೀಡಿ ಸಂಖ್ಯೆ:ಬಿ3:ಅಮೊ:ವಾಹನ:ಸಿಆರ್–37/09–10 ದಿ:05–12–2009ರಂದು ಪ್ರಕಟಣೆಯನ್ನು ಹೊರಡಿಸಿ ಪ್ರತಿಯನ್ನು ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯ ಪತ್ರ ವಿಭಾಗ, ಸರ್ಕಾರಿ ಮುದ್ರಣಾಲಯ, ಬೆಂಗಳೂರು ಇವರಿಗೆ ಹಾಗೂ ನಿರ್ದೇಶಕರು, ವಾರ್ತಾ ಮತ್ತು ಪ್ರಚಾರ ಇಲಾಖೆ, ಬೆಂಗಳೂರು ಇವರಿಗೆ ಕಳುಹಿಸಿ ರಾಜ್ಯ ಮಟ್ಟದ ಪ್ರಚಲಿತ ದೈನಿಕ ಪತ್ರಿಕೆಯಲ್ಲಿ ಪ್ರಕಟಿಸಲು ಕೋರಲಾಗಿತ್ತು. ಅದರಂತೆ ಈ ಪ್ರಕಟಣೆಯು ದಿ:18–12–2009ರಂದು ವಿಜಯ ಕರ್ನಾಟಕ ದಿನಪತ್ರಿಕೆಯಲ್ಲಿ ಮತ್ತು ದಿ:31–12–2009ರಂದು ರಾಜ್ಯ ಗೆಜೆಟ್ ಪತ್ರಿಕೆಯಲ್ಲಿ ಪ್ರಕಟಗೊಂಡು 30 ದಿನಗಳಾದರು ವಾಹನ ಮಾಲೀಕರಾಗಲೀ ಅಥವಾ ಅವರ ಪರ ವಕೀಲರಾಗಲೀ ಈ ನ್ಯಾಯಾಲಯಕ್ಕೆ ಹಕ್ಕುಬಾಧ್ಯತೆಯ ಅರ್ಜಿ ಸಲ್ಲಿಸಿರುವುದಿಲ್ಲ.

ಸಹಾಯಕ ಸರ್ಕಾರಿ ಅಭಿಯೋಜಕರು ದಿ:03–07–2010ರಂದು ವಾದ ಮಂಡಿಸಿ ಈ ವಾಹನದಲ್ಲಿ ಅರಣ್ಯ ಉತ್ಪನ್ನವನ್ನು ಕಳ್ಳ ಸಾಗಾಣಿಕೆ ಮಾಡುತ್ತಿರುವ ಸಮಯದಲ್ಲಿ ವಾಹನವನ್ನು ಅರಣ್ಯ ಉತ್ಪನ್ನದ ಸಮೇತ ವಲಯ ಅರಣ್ಯಾಧಿಕಾರಿ, ಶಿಕಾರಿಪುರ ವಲಯ, ಇವರು ಜಪ್ತುಮಾಡಿ, ಪ್ರಥಮ ವರ್ತಮಾನ ವರದಿ, ಜಪ್ತಿ ವರದಿ, ಮಹಜರ್ ವರದಿಯನ್ನು ಈ ನ್ಯಾಯಾಲಯಕ್ಕೆ ಹಾಜರ್ಪಡಿಸಿರುತ್ತಾರೆ. ಆದ್ದರಿಂದ ಈ ವಾಹನದಲ್ಲಿ ಅರಣ್ಯ ಉತ್ಪನ್ನ ಕಳ್ಳ ಸಾಗಾಣಿಕೆ ಮಾಡಿದ ಬಗ್ಗೆ ಸಾಬೀತಾಗಿದೆ. ಆದ್ದರಿಂದ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ.

ಈ ಪ್ರಕರಣದ ಎಲ್ಲಾ ದಾಖಲೆಗಳನ್ನು ಪರಿಶೀಲಿಸಿ, ಅಭಿಯೋಜಕರ ವಾದವನ್ನು ಕೇಳಿದೆ ಮತ್ತು ಈ ವಾಹನದ ಬಗ್ಗೆ ಪತ್ರಿಕಾ ಪ್ರಕಟಣೆ ಹೊರಡಿಸಿರುತ್ತದೆ. ಈ ಪ್ರಕಟಣೆಯು ರಾಜ್ಯ ಗೆಜೆಟ್‌ನಲ್ಲಿ ಪ್ರಕಟಗೊಂಡು 30 ದಿನಗಳಾದರೂ ಯಾರೂ ಹಕ್ಕು ಬಾಧ್ಯತೆಯ ಅರ್ಜಿಯನ್ನು ಈ ನ್ಯಾಯಾಲಯಕ್ಕೆ ಸಲ್ಲಿಸದೇ ಇದ್ದುದ್ದರಿಂದ ಈ ಪ್ರಕರಣದ ವಿದ್ಯಾಮಾನಗಳನ್ನು ಅರಿತು ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಆದೇಶ**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಶ್ರೀ ಮನೋಜ್ ಕುಮಾರ ತ್ರಿಪಾಠಿ, ಭಾ.ಅ.ಸೇ., ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಆದ ನಾನು, ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಎ) ರಿಂದ (ಜಿ) ಕಾಯಿದೆ ಪ್ರಕಾರ ವಲಯ ಅರಣ್ಯಾಧಿಕಾರಿ, ಶಿಕಾರಿಪುರ ವಲಯ, ಇವರು ಜಪ್ತು ಮಾಡಿದ ವಾಹನ ಮಾರುತಿ ಓಮ್ನಿ ಕೆಎ–28–ಎಂ–2331, ಛಾಸ್ಸಿಸ್ ನಂ: 144520 ಇಂಜಿನ್ ನಂ: 209569 ಮತ್ತು ಈ ವಾಹನದಲ್ಲಿದ್ದ ಸಾಗುವಾನಿ ನಾಟಾ 07=0.445 ಎಂ3 ಕರ್ನಾಟಕ ಸರ್ಕಾರದ ಸಂಪತ್ತು ಆಗಿರುವುದರಿಂದ ಅಂತಿಮವಾಗಿ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಮುಟ್ಟುಗೋಲು ಹಾಕಿಕೊಂಡ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇ ಮಾಡಲು ಆದೇಶಿಸಿದ್ದೇನೆ. ಈ ಆದೇಶವನ್ನು ಹೇಳಿ ಬರೆಯಿಸಿ, ಗಣಕಯಂತ್ರದಲ್ಲಿ ಮುದ್ರಿಸಿ, ನಂತರ ಸರಿಪಡಿಸಿ ದಿ:08–07–2010ರಂದು ನನ್ನ ಸಹಿ ಹಾಗೂ ಮೊಹರಿನೊಂದಿಗೆ ತೆರೆದ ನ್ಯಾಯಾಲಯದಲ್ಲಿ ಆದೇಶಿಸಿದ್ದೇನೆ. ಈ ಆದೇಶ ಹೊರಡಿಸಿದ 30 (ಮೂವತ್ತು) ದಿನಗಳ ಒಳಗಾಗಿ ಯಾರು ಈ ನ್ಯಾಯಾಲಯಕ್ಕೆ ಹಕ್ಕುಭಾಧ್ಯತೆ ಅರ್ಜಿ ಸಲ್ಲಿಸದೇ ಹೋದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ.

ಅಧಿಕೃತ ಅಧಿಕಾರಿ ಹಾಗೂ
ಉಪ ಅರಣ್ಯ ಸಂರಕ್ಷಣಾಧಿಕಾರಿ,
ಸಾಗರ ವಿಭಾಗ, ಸಾಗರ.

ಪಿ.ಆರ್.1159

**ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ ಸಾಗರ ವಿಭಾಗ ಸಾಗರ ಇವರ ನ್ಯಾಯಾಲಯ**
**ಬಿ3:ಅಮೊ:ವಾಹನ:ವಿವ–24/09–10, ದಿನಾಂಕ:8ನೇ ಜುಲೈ, 2010**

**ಉಪಸ್ಥಿತರು :** ಶ್ರೀ ಮನೋಜ್ ಕುಮಾರ್ ತ್ರಿಪಾಠಿ, ಭಾ.ಅ.ಸೇ.,
ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ.

**ಪಿರ್ಯಾಧಿದಾರರು :** ವಲಯ ಅರಣ್ಯಾಧಿಕಾರಿ,
ಆನಂದಪುರಂ ವಲಯ, ಚೋರಡಿ. (ಮಾನ್ಯ ಸಹಾಯಕ ಸರ್ಕಾರಿ ಅಭಿಯೋಜಕರು, ಸಾಗರ)

**ಆರೋಪಿಗಳು :** ಯಾರೂ ಪತ್ತೆಯಾಗಿರುವುದಿಲ್ಲ.

**ಭಾದ್ಯತೆದಾರರು :** ಯಾರೂ ಹಕ್ಕು ಬಾಧ್ಯತೆ ಅರ್ಜಿ ಸಲ್ಲಿಸಿರುವುದಿಲ್ಲ.

**ಪ್ರಸ್ತಾವನೆ:**

ದಿ: 27–09–2009ರಂದು ಆನಂದಪುರಂ ವಲಯ, ಚೋರಡಿಯ ಹಿರೇಹರಕ ಶಾಖೆಯ ವನಪಾಲಕರು ಮತ್ತು ಸಿಬ್ಬಂದಿಯವರು ಸಾಗರ ತಾಲ್ಲೂಕು ಆನಂದಪುರಂ ಹೋಬಳಿಯ ಭೈರಾಪುರ ಗ್ರಾಮದ ಸ.ನಂ: 80ರ ಸಾಗುವಾನಿ ನೆಡುತೋಪಿನ ಬಳಿ ಭೈರಾಪುರದಿಂದ ಅಂಬ್ಲಿಗೊಳಕ್ಕೆ ಹೋಗುವ ರಸ್ತೆಯಲ್ಲಿ ಇಲಾಖಾ ವಾಹನದಲ್ಲಿ ಗಸ್ತು ತಿರುಗುತ್ತಿರುವಾಗ ನೆಡುತೋಪಿನಿಂದ ಒಂದು ವಾಹನ ಬರುತ್ತಿರುವುದನ್ನು ತಪಾಸಣೆಗೆ ನಿಲ್ಲಿಸಲು ಸೂಚಿಸಿದಾಗ ವಾಹನದಲ್ಲಿದ್ದ ಅಸಾಮಿಗಳು ಇಲಾಖಾ ಸಿಬ್ಬಂದಿಗಳ ಮೇಲೆ ಕಲ್ಲು ತೂರಲು ಪ್ರಾರಂಭಿಸಿದರು. ವನಪಾಲಕ ಡಿ.ಎಸ್. ಶಿವಮೂರ್ತಪ್ಪ ಇವರು ಗಾಳಿಯಲ್ಲಿ ಒಂದು ಸುತ್ತು ಗುಂಡು ಹಾರಿಸಿದಾಗ 2–3ಜನ ಅಸಾಮಿಗಳು ಹೆದರಿ ವಾಹನವನ್ನು ಬಿಟ್ಟು ಕೈಗೆ ಸಿಗದೆ ಪರಾರಿಯಾದರು. ಓಡಿಹೋದ ಅಸಾಮಿಗಳ ಗುರುತು ಸಿಕ್ಕಿರುವುದಿಲ್ಲ. ನಂತರ ವಾಹನವನ್ನು ಪರಿಶೀಲಿಸಿದಾಗ ವಾಹನವು ಮಾರುತಿ ವ್ಯಾನ್ ಕೆಎ–26–ಎಂ–901, ಛಾಸ್ಸಿಸ್ ನಂ:ST-91-IN-368900, ಇಂಜಿನ್ ನಂ:F-8-BIN-1963025 ಆಗಿದ್ದು, ವಾಹನದೊಳಗಡೆ ಹಸಿಯಾದ ಸಾಗುವಾನಿ ಹಾಗೂ ಬೀಟೆ ಜಾತಿಯ ನಾಟಾಗಳಿದ್ದು, ಈ ತುಂಡುಗಳ ಎರಡು ಬದಿ ಗರಗಸದಿಂದ ಕೊಯ್ತು ಮಾಡಿದ್ದು, ಅವುಗಳ ಮೇಲೆ ಇಲಾಖಾ ಛಾಪಾದ ಗುರುತಿರಲಿಲ್ಲ. ಇದು ಅಕ್ರಮ ಸಾಗಾಣಿಕೆ ಎಂದು ಪರಿಗಣಿಸಿ ನಾಟಾಗಳನ್ನು ಅಳತೆ ಮಾಡಿ 7ತುಂಡು ಸಾಗುವಾನಿ, 2 ತುಂಡು ಬೀಟೆ ಒಟ್ಟು 9=0.506ಎಂ3 ಪ್ರಮಾಣವಿದ್ದು, ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಪ್ರಥಮ ವರ್ತಮಾನ ವರದಿ, ಮಹಜರ್ ವರದಿ, ಜಪ್ತಿ ವರದಿಯೊಂದಿಗೆ ಇಲಾಖಾ ಪರ ವಶಪಡಿಸಿಕೊಂಡು ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 24, 62, 71(ಎ), 104(ಎ) ಮತ್ತು ಕರ್ನಾಟಕ ಅರಣ್ಯ ಕಾನೂನು 1969 ಉಪನಿಯಮ 144, 165ರ ಪ್ರಕಾರ ಆನಂದಪುರಂ ವಲಯದ ಅ.ಮೊ.ಸಂ. 66/09–10ನ್ನು ದಾಖಲಿಸಿ, ವಾಹನವನ್ನು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ಸಮಕ್ಷಮ ಹಾಜರ್ಪಡಿಸಿರುತ್ತಾರೆ. ನಂತರ ಈ ವಾಹನವನ್ನು ಸುರಕ್ಷತೆಗಾಗಿಡಲು ವಲಯ ಅರಣ್ಯಾಧಿಕಾರಿ, ಸರ್ಕಾರಿ ನಾಟಾ ಸಂಗ್ರಹಾಲಯ, ಸಾಗರ ಇವರ ಸುಪರ್ಧಿಗೆ ಕೊಡಲು ದಿ: 13–10–2009ರಂದು ಆದೇಶವಾಗಿರುತ್ತದೆ.

ಈ ವಾಹನದ ಬಿ ಪ್ರತಿಯನ್ನು ಈ ನ್ಯಾಯಾಲಯಕ್ಕೆ ಒದಗಿಸಲು ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿ, ಗದಗ್ ಇವರಿಗೆ ಪತ್ರ ಸಂಖ್ಯೆ:ಬಿ3:ಅಮೊ:ವಾಹನ–24/09–10 ದಿ:30–10–2009 ರಂದು ಪತ್ರ ಬರೆದು ಕೋರಲಾಗಿತ್ತು. ಈ ವಾಹನದ ಸಿಸಿಯನ್ನು ಸಾರಿಗೆ ಅಧಿಕಾರಿ, ಧಾರವಾಡ ಇವರಿಗೆ ದಿ: 27–11–2001ರಂದು ವರ್ಗಾಯಿಸಿರುವುದಾಗಿ ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿ, ಗದಗ್ ಇವರು ತಿಳಿಸಿರುತ್ತಾರೆ. ಅದರಂತೆ ಸಾರಿಗೆ ಅಧಿಕಾರಿ, ಧಾರವಾಡ ಇವರಿಗೆ ದಿ:05–12–2009 ಮತ್ತು ದಿ: 11–03–2010ರಂದು ಪತ್ರ ಬರೆದು ಬಿ ಪ್ರತಿ ಒದಗಿಸಲು ಕೋರಲಾಗಿತ್ತು. ಆದರೆ ಅವರು ಯಾವುದೇ ಮಾಹಿತಿಯನ್ನು ಈ ನ್ಯಾಯಾಲಯಕ್ಕೆ ಒದಗಿಸಿರುವುದಿಲ್ಲ.

ಈ ನಡುವೆ ಈ ವಾಹನದ ಬಗ್ಗೆ ಹೆಚ್ಚಿನ ಪ್ರಚಾರಕ್ಕಾಗಿ ಈ ನ್ಯಾಯಾಲಯದಿಂದ 30 ದಿನಗಳ ಕಾಲಾವಕಾಶ ನೀಡಿ ಈ ನ್ಯಾಯಾಲಯದ ಪತ್ರ ಸಂಖ್ಯೆ; ಬಿ3:ಅಮೊ:ವಾಹನ:ಸಿಅರ್–37/09–10 ದಿ:05–12–2009ರಂದು ಪ್ರಕಟಣೆಯನ್ನು ಹೊರಡಿಸಿ ಪ್ರತಿಯನ್ನು ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯ ಪತ್ರ ವಿಭಾಗ, ಸರ್ಕಾರಿ ಮುದ್ರಣಾಲಯ, ಬೆಂಗಳೂರು ಇವರಿಗೆ ಹಾಗೂ ನಿರ್ದೇಶಕರು, ವಾರ್ತಾ ಮತ್ತು ಪ್ರಚಾರ ಇಲಾಖೆ, ಬೆಂಗಳೂರು ಇವರಿಗೆ ಕಳುಹಿಸಿ ರಾಜ್ಯ ಮಟ್ಟದ ಪ್ರಚಲಿತ ದೈನಿಕ ಪತ್ರಿಕೆಯಲ್ಲಿ ಪ್ರಕಟಿಸಲು ಕೋರಲಾಗಿತ್ತು. ಅದರಂತೆ ಈ ಪ್ರಕಟಣೆಯು ದಿ:31–12–2009ರಂದು ರಾಜ್ಯ ಗೆಜೆಟ್ ಪತ್ರಿಕೆಯಲ್ಲಿ ಮತ್ತು ದಿ:18–12–2009ರಂದು ವಿಜಯ ಕರ್ನಾಟಕ ದಿನಪತ್ರಿಕೆಯಲ್ಲಿ ಪ್ರಕಟಗೊಂಡು 30 ದಿನಗಳಾದರು ವಾಹನ

ಮಾಲೀಕರಾಗಲೀ ಅಥವಾ ಅವರ ಪರ ವಕೀಲರಾಗಲೀ ಈ ನ್ಯಾಯಾಲಯಕ್ಕೆ ಹಕ್ಕುಬಾಧ್ಯತೆಯ ಅರ್ಜಿ ಸಲ್ಲಿಸಿರುವುದಿಲ್ಲ. ಆದ್ದರಿಂದ ಈ ಪ್ರಕರಣದಲ್ಲಿ ಮುಂದಿನ ಕ್ರಮ ಜರುಗಿಸಲಾಯಿತು.

ಸಹಾಯಕ ಸರ್ಕಾರಿ ಅಭಿಯೋಜಕರು ದಿ:03–07–2010 ರಂದು ವಾದ ಮಂಡಿಸಿ, ಸದರಿ ವಾಹನದಲ್ಲಿ ಅರಣ್ಯ ಉತ್ಪನ್ನವನ್ನು ಸಾಗಿಸುತ್ತಿರುವಾಗ ಮಾಲು ಸಹಿತ ವಲಯ ಅರಣ್ಯಾಧಿಕಾರಿ, ಆನಂದಪುರಂ ವಲಯ, ಚೋರಡಿ ಇವರು ವಾಹನವನ್ನು ಜಪ್ತುಮಾಡಿ ಮಹಜರ್ ಪ್ರತಿ ಮತ್ತು ಪ್ರಥಮ ವರ್ತಮಾನ ವರದಿ, ಜಪ್ತಿ ವರದಿಯನ್ನು ಈ ನ್ಯಾಯಾಲಯಕ್ಕೆ ಹಾಜರ್ಪಡಿಸಿರುವುದರಿಂದ ಈ ವಾಹನದಲ್ಲಿ ಬೀಟೆ ಮತ್ತು ಸಾಗುವಾನಿ ತುಂಡುಗಳನ್ನು ಅಕ್ರಮವಾಗಿ ಸಾಗಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ.

ಈ ಪ್ರಕರಣದ ಎಲ್ಲಾ ದಾಖಲೆಗಳನ್ನು ಪರಿಶೀಲಿಸಿ, ಅಭಿಯೋಜಕರ ವಾದವನ್ನು ಕೇಳಿದೆ. ಹಾಗೂ ಈ ವಾಹನದ ಬಗ್ಗೆ ಪತ್ರಿಕಾ ಪ್ರಕಟಣೆ ಹೊರಡಿಸಿರುತ್ತದೆ. ಈ ಪ್ರಕಟಣೆಯು ರಾಜ್ಯ ಗೆಜೆಟ್‌ನಲ್ಲಿ ಮತ್ತು ದಿನಪತ್ರಿಕೆಯಲ್ಲಿ ಪ್ರಕಟಗೊಂಡು 30 ದಿನಗಳಾದರೂ ಯಾರೂ ಹಕ್ಕು ಬಾಧ್ಯತೆಯ ಅರ್ಜಿಯನ್ನು ಈ ನ್ಯಾಯಾಲಯಕ್ಕೆ ಸಲ್ಲಿಸದೇ ಇದ್ದುದ್ದರಿಂದ ಈ ಪ್ರಕರಣದ ವಿದ್ಯಾಮಾನಗಳನ್ನು ಅರಿತು ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಆದೇಶ**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಶ್ರೀ ಮನೋಜ್ ಕುಮಾರ್ ತ್ರಿಪಾಠಿ, ಭಾ.ಅ.ಸೇ., ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಆದ ನಾನು, ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಎ) ರಿಂದ (ಜಿ) ಪ್ರಕಾರ ವಲಯ ಅರಣ್ಯಾಧಿಕಾರಿ, ಆನಂದಪುರಂ ವಲಯ, ಚೋರಡಿ ಇವರು ಜಪ್ತು ಮಾಡಿದ ವಾಹನ ಮಾರುತಿ ವ್ಯಾನ್ ಕೆಎ–26–ಎಂ–901 (ಛಾಸ್ಸಿಸ್ ನಂ:ST-91-IN-368900, ಇಂಜಿನ್ ನಂ: F-8-BIN-1963025) ನ್ನು ಮತ್ತು ಈ ವಾಹನದಲ್ಲಿದ್ದ 7 ತುಂಡು ಸಾಗುವಾನಿ, 2 ತುಂಡು ಬೀಟೆ ಒಟ್ಟು 9=0.506ಎಂ3ವು ಕರ್ನಾಟಕ ಸರ್ಕಾರದ ಸಂಪತ್ತು ಆಗಿರುವುದರಿಂದ ಅಂತಿಮವಾಗಿ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಮುಟ್ಟುಗೋಲು ಹಾಕಿಕೊಂಡ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇ ಮಾಡಲು ಆದೇಶಿಸಿದ್ದೇನೆ. ಈ ಆದೇಶವನ್ನು ಹೇಳಿ ಬರೆಯಿಸಿ, ಗಣಕಯಂತ್ರದಲ್ಲಿ ಮುದ್ರಿಸಿ, ನಂತರ ಸರಿಪಡಿಸಿ ದಿ:08–07–2010 ರಂದು ನನ್ನ ಸಹಿ ಹಾಗೂ ಮೊಹರಿನೊಂದಿಗೆ ತೆರೆದ ನ್ಯಾಯಾಲಯದಲ್ಲಿ ಆದೇಶಿಸಿದ್ದೇನೆ. ಈ ಆದೇಶ ಹೊರಡಿಸಿದ 30 (ಮೂವತ್ತು) ದಿನಗಳ ಒಳಗಾಗಿ ಯಾರು ಈ ನ್ಯಾಯಾಲಯಕ್ಕೆ ಹಕ್ಕುಭಾಧ್ಯತೆ ಅರ್ಜಿ ಸಲ್ಲಿಸದೇ ಹೋದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ.

ಅಧಿಕೃತ ಅಧಿಕಾರಿ ಹಾಗೂ<br>
ಉಪ ಅರಣ್ಯ ಸಂರಕ್ಷಣಾಧಿಕಾರಿ,<br>
ಸಾಗರ ವಿಭಾಗ, ಸಾಗರ.

ಪಿ.ಆರ್.1160

**ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಮಂಡ್ಯ ಜಿಲ್ಲೆ, ಮಂಡ್ಯ ಇವರ ನ್ಯಾಯಾಲಯದಲ್ಲಿ.**

**ಡಿಟಿಸಿಆರ್/393/2009–10 ದಿನಾಂಕ:19ನೇ ಜುಲೈ, 2010**

ಆರಕ್ಷಕ ಉಪ ನಿರೀಕ್ಷಕರು, ಅಬಕಾರಿ ಜಾರಿ ಮತ್ತು ಲಾಟರಿ ನಿಷೇಧ ಘಟಕ, ವಿಶೇಷ ಪೋಲೀಸ್ ಠಾಣೆ, ಮಂಡ್ಯ ಇವರ ಅಪರಾಧ ಸಂಖ್ಯೆ:05/2010, ದಿನಾಂಕ:09–02–2010

**ಉಪಸ್ಥಿತರು:** ಡಾ: ವೈ.ಮಂಜುನಾಥ<br>
ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, (ಪ್ರಭಾರ)<br>
ಮಂಡ್ಯ ಜಿಲ್ಲೆ, ಮಂಡ್ಯ.

| **ಫಿರ್ಯಾದುದಾರರು** | **ಆರೋಪಿ** |
|---|---|
| ಆರಕ್ಷಕ ಉಪ ನಿರೀಕ್ಷಕರು,<br>ಅಬಕಾರಿ ಜಾರಿ ಮತ್ತು ಲಾಟರಿ ನಿಷೇಧ ಘಟಕ,<br>ವಿಶೇಷ ಪೋಲೀಸ್ ಠಾಣೆ,<br>ಮಂಡ್ಯ ಜಿಲ್ಲೆ. | ಎಂ.ಎನ್.ಶ್ರೀನಿವಾಸ್ (ಉ) ಮಾರ್ಕ್ ಶ್ರೀನಿವಾಸ ಬಿನ್ ಲೇಟ್ ನಾಗರಾಜು, 36 ವರ್ಷ, ಈಡಿಗರ ಜನಾಂಗ, ವಾಸ: ನಂ.13, 3 ನೇ ಕ್ರಾಸ್, ಅರ್ಕೇಶ್ವರ ನಗರ, ಮಂಡ್ಯ ಸಿಟಿ ಮತ್ತು ಇತರರು. |

**ಪ್ರಕರಣದ ಮುಖ್ಯಾಂಶಗಳು**

ದಿನಾಂಕ:09–02–2010 ರಂದು ಮಧ್ಯಾಹ್ನ 12–30 ರ ಸಮಯದಲ್ಲಿ ಮಂಡ್ಯ ತಾಲ್ಲೂಕು, ಮಂಡ್ಯ – ಕೆ.ಎಂ.ದೊಡ್ಡಿ ರಸ್ತೆಯ ಹಬೀಬ್ ಜೀವಾ ಆಯಿಲ್ ಫ್ಯಾಕ್ಟರಿ ಬಳಿ ಕಮ್ಮನಾಯಕನಹಳ್ಳಿಗೆ ಹೋಗುವ ಕ್ರಾಸ್ ಬಳಿ ಅಕ್ರಮವಾಗಿ 17.280 ಲೀ ನಕಲಿ ಮದ್ಯವನ್ನು ಮಾರುತಿ 800 ಕಾರು ಸಂಖ್ಯೆ: ಕೆಎ–03/ಎನ್–3054 ವಾಹನ ದಲ್ಲಿ ಹೊಂದಿ ಸಾಗಾಣಿಕೆ ಮಾಡುತ್ತಿದ್ದುದನ್ನು ಪತ್ತೆಮಾಡಿದ ಫಿರ್ಯಾದುದಾರರು ಈ ಅಕ್ರಮವು ಕರ್ನಾಟಕ ಅಬಕಾರಿ ಕಾಯ್ದೆ 1965 ರ ಕಲಂ 14,32,34,38(ಎ) ಮತ್ತು 43(ಎ) ರ ರೀತ್ಯಾ ಅಪರಾಧವಾದ್ದರಿಂದ ಮೇಲ್ಕಂಡ ನಕಲಿ ಮದ್ಯ ಮತ್ತು ವಾಹನವನ್ನು ಪಂಚನಾಮೆಯಲ್ಲಿ ಅಮಾನತ್ತುಪಡಿಸಿಕೊಂಡು ಈ ಬಗ್ಗೆ ಅಪರಾಧ ಸಂಖ್ಯೆ:05/2010 ರಂತೆ ಮೊಕದ್ದಮೆಯನ್ನು ದಾಖಲು ಮಾಡಿರುತ್ತಾರೆ. ಹಾಗೂ ವಶಪಡಿಸಿಕೊಂಡ ಸ್ವತ್ತುಗಳನ್ನು ಈ ಪ್ರಾಧಿಕಾರದ ಪೂರ್ವಾನುಮತಿಯಂತೆ ಅಬಕಾರಿ ನಿರೀಕ್ಷಕರು, ಮಂಡ್ಯ ವಲಯ, ಮಂಡ್ಯ ಇವರಿಗೆ ಹಸ್ತಾಂತರಿಸಿರುತ್ತಾರೆ.

ಪ್ರಕರಣದ ತನಿಖೆಯನ್ನು ಮುಂದುವರೆಸಿದ ತನಿಖಾಧಿಕಾರಿಗಳು ಜಪ್ತುಪಡಿಸಿರುವ ವಸ್ತುಗಳನ್ನು ತಮ್ಮದೆಂದು ಹಕ್ಕು ಸಾಧಿಸಲು ಯಾರು ಮುಂದೆ ಬಾರದೆ ಇರುವುದರಿಂದ ಮೇಲ್ಕಂಡ ನಕಲಿ ಮದ್ಯ, ವಾಹನ ಮತ್ತು ಇತರೇ ವಸ್ತುಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ದಿನಾಂಕ:17–03–2010 ರ ಪತ್ರದ ಮೂಲಕ ಕೋರಿರುತ್ತಾರೆ.

ಈ ಮಧ್ಯೆ ಪ್ರಾಧಿಕಾರದಲ್ಲಿ ಮುಟ್ಟುಗೋಲು ನಡುವಳಿಗಳನ್ನು ಕೈಗೊಂಡಿದ್ದು ತನಿಖಾಧಿಕಾರಿಗಳ ಶಿಫಾರಸ್ಸಿನ ಮೇರೆಗೆ ಪ್ರಕರಣದಲ್ಲಿ ವಶಪಡಿಸಿಕೊಂಡಿರುವ 17.280 ಲೀ ನಕಲಿಮದ್ಯ (ರಾಸಾಯನಿಕ ಪರೀಕ್ಷೆಗೆ ತೆಗೆದ ಮಾದರಿ ಹೊರತುಪಡಿಸಿ) ಮತ್ತು ಇತರೇ ವಸ್ತುಗಳನ್ನು ತನ್ನದೆಂದು ಕೋರಿ ಯಾರು ಹಕ್ಕು ಸಾಧಿಸದ ಕಾರಣ ದಿನಾಂಕ:24–03–2010 ರಂದು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗಿದೆ.

ಪ್ರಕರಣದಲ್ಲಿ ಜಪ್ತುಪಡಿಸಿರುವ ವಾಹನದ "ಬಿ" ವಹಿ ಕೋರಿ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಬೆಂಗಳೂರು ಪೂರ್ವ, ಇಂದಿರಾನಗರ, ಬೆಂಗಳೂರು –ಇವರಿಗೆ ದಿನಾಂಕ:24–03–2010 ಮತ್ತು 17–06–2010 ರಂದು ಈ ಪ್ರಾಧಿಕಾರದಿಂದ ಪತ್ರ ಬರೆಯಲಾಗಿರುತ್ತದೆ. ಇದುವರೆವಿಗೂ ಯಾವುದೇ ಪ್ರತಿಕ್ರಿಯೆ ಇರುವುದಿಲ್ಲ.

ದಾಖಲಾತಿಗಳನ್ನು ಪರಿಶೀಲಿಸಲಾಗಿ ಪ್ರಕರಣದಲ್ಲಿ ಜಪ್ತುಪಡಿಸಿರುವ ಮಾರುತಿ 800 ಕಾರು ಸಂಖ್ಯೆ: ಕೆಎ–03/ಎನ್–3054 ವಾಹನದಲ್ಲಿ ದಿನಾಂಕ:09–02–2010 ರಂದು ಮದ್ಯಸಾರಯುಕ್ತ ದ್ರವವನ್ನು ಹೊಂದಿ ಸಾಗಾಣಿಕೆ ಮಾಡಿರುವುದು ಮೇಲ್ನೋಟಕ್ಕೆ ಸಾಬೀತಾಗಿರುತ್ತದೆ.ಈ ಪ್ರಕರಣ ದಾಖಲಾಗಿ ಈಗಾಗಲೇ ಸುಮಾರು (4) ತಿಂಗಳುಗಳಿಗೂ ಹೆಚ್ಚು ಕಾಲ ಕಳೆದರೂ ಸಹ ಜಪ್ತಿಯಾದ ವಾಹನವು ತನ್ನದೆಂದಾಗಲೀ, ಈ ಬಗ್ಗೆ ತಾನು ವಿಚಾರಣೆ ನಡೆಸುತ್ತೇನೆ ಎಂದಾಗಲೀ ಯಾರೊಬ್ಬರೂ ಇಂದಿನವರೆವಿಗೂ ಖುದ್ದಾಗಿಯಾಗಲೀ, ಅಥವಾ ತನ್ನ ವಕೀಲರ ಮೂಲಕವಾಗಲೀ ಅರ್ಜಿಯನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುವುದಿಲ್ಲ. ವಾಹನದ ಮಾಲೀಕರಿಗೆ ಸಾಕಷ್ಟು ದಿನಗಳ ಕಾಲಾವಕಾಶವನ್ನು ನೀಡಿದಾಗಲೂ ಸಹ ಈ ಪ್ರಾಧಿಕಾರದಲ್ಲಿ ತನ್ನ ಹಕ್ಕನ್ನು ಸ್ಥಾಪಿಸದೇ ಇರುವುದರಿಂದ, ಸದರಿಯವರು ತನ್ನ ಮೇಲೆ ಹೊರಿಸಿರುವ ಆರೋಪವನ್ನು ಪರೋಕ್ಷವಾಗಿ ಒಪ್ಪಿಕೊಂಡಂತಾಗಿದೆ. ಅಲ್ಲದೇ ಈ ಘಟನೆಯು ಸಂಭವಿಸಿದ ದಿನದಂದು ವಾಹನವು ಯಾರ ವಶದಲ್ಲಿತ್ತೋ ಅವರಿಗೆ ಅಥವಾ ವಾಹನದ ಮಾಲೀಕರಿಗೆ/ಏಜೆಂಟರ ಗಮನಕ್ಕೆ ಬಾರದೇ ಮತ್ತು ಅವರುಗಳು ಶಾಮೀಲಾಗದೇ ಹಾಗೂ ಅವರೆಲ್ಲರಿಗೂ ಅರಿವಿಲ್ಲದೇ ಈ ಘಟನೆ ನಡೆದಿದೆ ಎಂಬುದನ್ನು ತೃಪ್ತಿಕರವಾಗಿ ಈ ಪ್ರಾಧಿಕಾರದಲ್ಲಿ ನಿರೂಪಿಸಿರುವುದಿಲ್ಲ. ವಾಹನವನ್ನು ಚಾಲನೆಯಿಲ್ಲದೇ ಹೆಚ್ಚು ಸಮಯ ಇಟ್ಟುಕೊಂಡಲ್ಲಿ ಹವಾಮಾನದ ವೈಪರೀತ್ಯಕ್ಕೆ ಹಾಳಾಗುವ ಮತ್ತು ಬಿಡಿ ಭಾಗಗಳು ತುಕ್ಕು ಹಿಡಿಯುವ ಸಂಭವವಿರುವುದರಿಂದ, ಸರ್ಕಾರದ ಆದಾಯದ ಹಿತದೃಷ್ಟಿಯಿಂದ ಹಾಗೂ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾದ ಅಧಿಕಾರ ಪ್ರಾಧಿಕಾರಕ್ಕೆ ದತ್ತವಾಗಿರುವುದರಿಂದ ಮೇಲ್ಕಂಡ ವಾಹನವನ್ನು ವಾರಸುದಾರರಿಲ್ಲದ ಸ್ವತ್ತು ಎಂದು ಪರಿಗಣಿಸಿ, ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿದೆ ಎಂದು ಅಭಿಪ್ರಾಯಪಟ್ಟು ಈ ಕೆಳಕಂಡ ಆದೇಶ.

**ಅದೇಶ ಸಂಖ್ಯೆ: ಡಿಟಿಸಿಆರ್/393/2009–10, ದಿನಾಂಕ:19ನೇ ಜುಲೈ, 2010**

ಡಾ: ವೈ.ಮಂಜುನಾಥ, ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ (ಪ್ರಭಾರ) ಮಂಡ್ಯ ಜಿಲ್ಲೆ, ಮಂಡ್ಯ ಆದ ನಾನು ಕರ್ನಾಟಕ ಅಬಕಾರಿ ಕಾಯ್ದೆ 1965 ರ ಕಲಂ 43 (ಸಿ) ಅಡಿಯಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ ಆರಕ್ಷಕ ಉಪ ನಿರೀಕ್ಷಕರು, ವಿಶೇಷ ಪೋಲೀಸ್ ಠಾಣೆ, ಅಬಕಾರಿ ಜಾರಿ ಮತ್ತು ಲಾಟರಿ ನಿಷೇಧ ಘಟಕ, ಮಂಡ್ಯ

ಇವರ ಅಪರಾಧ ಸಂಖ್ಯೆ:05/2010, ದಿನಾಂಕ:09–02–2010 ರ ಪ್ರಕರಣದಲ್ಲಿ ಜಪ್ತುಪಡಿಸಿರುವ ಮಾರುತಿ 800 ಕಾರು ಸಂಖ್ಯೆ: ಕೆಎ–03/ಎನ್–3054 ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ಈ ಆದೇಶವನ್ನು ಇಂದು ಅಂದರೆ 2010 ನೇ ಇಸವಿ ಜುಲೈ ತಿಂಗಳ 19 ನೇ ತಾರೀಖಿನಂದು ವಿಷಯ ನಿರ್ವಾಹಕರಿಗೆ ಉಕ್ತ ಲೇಖನ ನೀಡಿ, ಗಣಕಯಂತ್ರದಲ್ಲಿ ಬೆರಳಚ್ಚು ಮಾಡಿಸಿದ ಪ್ರತಿಯಲ್ಲಿನ ತಪ್ಪುಗಳನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಅಧಿಕೃತ ಅಧಿಕಾರಿ ಹಾಗೂ
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್,
ಮಂಡ್ಯ ಜಿಲ್ಲೆ, ಮಂಡ್ಯ.

ಪಿ.ಆರ್.1128

**ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಮಂಡ್ಯ ಜಿಲ್ಲೆ, ಮಂಡ್ಯ ಇವರ ನ್ಯಾಯಾಲಯದಲ್ಲಿ.**

**ಡಿಟಿಸಿಆರ್/526/2009–10 ದಿನಾಂಕ:19ನೇ ಜುಲೈ, 2010**

ಆರಕ್ಷಕ ಉಪ ನಿರೀಕ್ಷಕರು, ವಿಶೇಷ ಪೋಲೀಸ್ ಠಾಣೆ, ಅಬಕಾರಿ ಜಾರಿ ಮತ್ತು ಲಾಟರಿ ನಿಷೇಧ ಘಟಕ, ಮಂಡ್ಯ ಇವರ ಅಪರಾಧ ಸಂಖ್ಯೆ: 10/2010, ದಿನಾಂಕ:25–03–2010.

**ಉಪಸ್ಥಿತರು:** ಡಾ: ವೈ.ಮಂಜುನಾಥ
ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, (ಪ್ರಭಾರ)
ಮಂಡ್ಯ ಜಿಲ್ಲೆ, ಮಂಡ್ಯ.

| **ಪಿರ್ಯಾದುದಾರರು** | **ಆರೋಪಿಗಳು.** |
|---|---|
| ಆರಕ್ಷಕ ಉಪ ನಿರೀಕ್ಷಕರು<br>ವಿಶೇಷ ಪೋಲೀಸ್ ಠಾಣೆ<br>ಅಬಕಾರಿ ಜಾರಿ ಮತ್ತು ಲಾಟರಿ ನಿಷೇಧ ಘಟಕ,<br>ಮಂಡ್ಯ | 1) ಬಿ.ಎಸ್.ಶೇಖರ ಬಿನ್ ಶಿವಣ್ಣ, 20 ವರ್ಷ, ನಾಯಕರ ಜನಾಂಗ, ಪ್ರಭಾತ್ ಮಿಲ್ಟ್ರಿ ಹೋಟೆಲ್‌ನಲ್ಲಿ ಸಪ್ಲೈಯರ್, ಬಿಳಿಗುಲಿ ಗ್ರಾಮ, ನಂಜನಗೂಡು ತಾಲ್ಲೂಕು, ಮೈಸೂರು ಜಿಲ್ಲೆ.<br>2) ನಾಗರಾಜು ಬಿನ್ ದುರ್ಗಯ್ಯ, 33 ವರ್ಷ, ಈಡಿಗರ ಜನಾಂಗ, ಕೆ.ಎಂ.ದೊಡ್ಡಿಯ ಸಂತೋಷ್ ಬಾರ್‌ನಲ್ಲಿ ಸಪ್ಲೈಯರ್, ನುಗ್ಗೇಹಳ್ಳಿ ಗ್ರಾಮ, ಚನ್ನರಾಯಪಟ್ಟಣ ತಾಲ್ಲೂಕು, ಹಾಸನ ಜಿಲ್ಲೆ. |

**ಪ್ರಕರಣದ ಮುಖ್ಯಾಂಶಗಳು**

ದಿನಾಂಕ:25–03–2010 ರಂದು ಬೆಳಿಗ್ಗೆ 06–00 ರ ಸಮಯದಲ್ಲಿ ಮದ್ದೂರು ತಾಲ್ಲೂಕಿನ ಕೆ.ಎಂ.ದೊಡ್ಡಿ ಟೌನ್‌ನ ಕೆ.ಎಂ.ದೊಡ್ಡಿ–ಹಲಗೂರು ಮುಖ್ಯರಸ್ತೆ ಜನನಿ ಕಾನ್ವೆಂಟ್ ಮುಂಭಾಗದಲ್ಲಿ ಅಕ್ರಮವಾಗಿ 77.580 ಲೀ ಮದ್ಯವನ್ನು ಟಿ.ವಿ.ಎಸ್ ಸ್ಟಾರ್ ಸಿಟಿ ಬೈಕ್ ಸಂಖ್ಯೆ: ಕೆಎ–54/ಇ–1201 ವಾಹನದಲ್ಲಿ ಹೊಂದಿ ಸಾಗಾಣಿಕೆ ಮಾಡುತ್ತಿದ್ದುದನ್ನು ಪತ್ತೆಮಾಡಿದ ಪಿರ್ಯಾದುದಾರರು ಈ ಅಕ್ರಮವು ಕರ್ನಾಟಕ ಅಬಕಾರಿ ಕಾಯ್ದೆ 1965 ರ ಕಲಂ 32,34,43 (ಎ) ರ ರೀತ್ಯಾ ಅಪರಾಧವಾದ್ದರಿಂದ ಈ ಬಗ್ಗೆ ಅಪರಾಧ ಸಂಖ್ಯೆ:10/2010 ರಂತೆ ಮೊಕದ್ದಮೆಯನ್ನು ದಾಖಲು ಮಾಡಿರುತ್ತಾರೆ. ಹಾಗೂ ಈ ಪ್ರಾಧಿಕಾರದ ಪೂರ್ವಾನುಮತಿಯಂತೆ ಜಪ್ತುಪಡಿಸಿ ಕೊಂಡಿರುವ ಸ್ವತ್ತುಗಳನ್ನು ಅಬಕಾರಿ ನಿರೀಕ್ಷಕರು, ಮದ್ದೂರು ವಲಯ ಇವರಿಗೆ ಹಸ್ತಾಂತರಿಸಿರುತ್ತಾರೆ.

ಪ್ರಕರಣದ ತನಿಖೆಯನ್ನು ಮುಂದುವರೆಸಿದ ತನಿಖಾಧಿಕಾರಿಗಳು ಜಪ್ತುಪಡಿಸಿರುವ ವಸ್ತುಗಳನ್ನು ತಮ್ಮದೆಂದು ಹಕ್ಕು ಸಾಧಿಸಲು ಯಾರು ಮುಂದೆ ಬಾರದೆ ಇರುವುದರಿಂದ ಮೇಲ್ಕಂಡ ಮದ್ಯ, ವಾಹನ ಮತ್ತು ಇತರೇ ವಸ್ತುಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ದಿನಾಂಕ:28–05–2010 ರ ಪತ್ರದ ಮೂಲಕ ಕೋರಿರುತ್ತಾರೆ.

ಈ ಮಧ್ಯೆ ಪ್ರಾಧಿಕಾರದಲ್ಲಿ ಮುಟ್ಟುಗೋಲು ನಡುವಳಿಗಳನ್ನು ಕೈಗೊಂಡಿದ್ದು ತನಿಖಾಧಿಕಾರಿಗಳ ಶಿಫಾರಸ್ಸಿನ ಮೇರೆಗೆ ಪ್ರಕರಣದಲ್ಲಿ ವಶಪಡಿಸಿಕೊಂಡಿರುವ 77.580 ಲೀ ಮದ್ಯ (ರಾಸಾಯನಿಕ ಪರೀಕ್ಷೆಗೆ ತೆಗೆದ ಮಾದರಿ ಹೊರತುಪಡಿಸಿ) ಮತ್ತು ಇತರೇ ವಸ್ತುಗಳನ್ನು ತನ್ನದೆಂದು ಕೋರಿ ಯಾರು ಹಕ್ಕು ಸಾಧಿಸದ ಕಾರಣ ದಿನಾಂಕ:18–06–2010 ರಂದು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗಿದೆ.

ಟಿ.ವಿ.ಎಸ್ ಸ್ಟಾರ್ ಸಿಟಿ ಬೈಕ್ ಸಂಖ್ಯೆ: ಕೆಎ–54/ಇ–1201 ವಾಹನಕ್ಕೆ ಸಂಬಂಧಪಟ್ಟಂತೆ ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ನಾಗಮಂಗಲ ಇವರು ನೀಡಿರುವ "ಬಿ" ವಹಿಯ ಪರಿಶೀಲನೆಯಿಂದ ಶ್ರೀ ಪಿ.ಕೃಷ್ಣ ಬಿನ್ ಪುಟ್ಟೇಗೌಡ, ಬಿಂಡಿಗನವಿಲೆ ಅಂಚೆ, ನಾಗಮಂಗಲ ತಾಲ್ಲೂಕು, ಮಂಡ್ಯ ಜಿಲ್ಲೆ ಇವರು ವಾಹನದ ಮಾಲೀಕರೆಂಬುದು ತಿಳಿದುಬಂದಿದ್ದು ಸದರಿಯವರಿಗೆ ದಿನಾಂಕ:18–06–2010 ರಂದು ಕರ್ನಾಟಕ ಅಬಕಾರಿ ಕಾಯ್ದೆ 1965 ರ ಕಲಂ 43 (ಬಿ) ರನ್ವಯ ಕಾರಣ ಕೇಳುವ ನೋಟೀಸ್‌ನ್ನು ನೊಂದಣಿ ಅಂಚೆಯ ಮೂಲಕ ನೀಡಲಾಗಿತ್ತು. ನೊಂದಣಿ ಅಂಚೆ ಮೇಲ್ಕಂಡ ವಿಳಾಸದಲ್ಲಿ ಸ್ವೀಕೃತಿಯಾಗಿರುತ್ತದೆ ಹಾಗೂ ಅಬಕಾರಿ ನಿರೀಕ್ಷಕರು, ಮದ್ದೂರು ವಲಯ ಇವರ ಮೂಲಕ ಜಾರಿಯಾಗಿರುತ್ತದೆ. ವಾಹನದ ಮಾಲೀಕರಾದ ಶ್ರೀ ಪಿ.ಕೃಷ್ಣ ಬಿನ್ ಪುಟ್ಟೇಗೌಡ ಇವರು ದಿನಾಂಕ:22–06–2010 ರಂದು ಅಬಕಾರಿ ನಿರೀಕ್ಷಕರು, ಮದ್ದೂರು ವಲಯ ಇವರಿಗೆ ನೀಡಿರುವ ಹೇಳಿಕೆಯಲ್ಲಿ " ಮೇಲ್ಕಂಡ ವಾಹನವನ್ನು ಆರ್ಥಿಕ ತೊಂದರೆಗಳ ಕಾರಣದಿಂದ ಈಗಾಗಲೇ ಬೇರೆಯವರಿಗೆ ಮಾರಾಟ ಮಾಡಿರುವುದಾಗಿ, ಪ್ರಸ್ತುತ ಪ್ರಸ್ತಾಪಿತ ವಾಹನಕ್ಕೂ ತನಗೂ ಯಾವುದೇ ಸಂಬಂಧ ಇರುವುದಿಲ್ಲವೆಂದು, ನ್ಯಾಯಾಲಯಕ್ಕೆ ಹಾಜರಾಗಿ ಷರತ್ತುಗಳನ್ನು ಪೂರೈಸಲು ಸಾಧ್ಯವಿಲ್ಲದಿರುವುದರಿಂದ ಮೇಲ್ಕಂಡ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ನನ್ನದೇನೂ ಅಭ್ಯಂತರವಿಲ್ಲ" ಎಂದು ತಿಳಿಸಿರುತ್ತಾರೆ.

ದಾಖಲಾತಿಗಳನ್ನು ಪರಿಶೀಲಿಸಲಾಗಿ ಪ್ರಕರಣದಲ್ಲಿ ಜಪ್ತುಪಡಿಸಿರುವ ಟಿ.ವಿ.ಎಸ್ ಸ್ಟಾರ್ ಸಿಟಿ ಬೈಕ್ ಸಂಖ್ಯೆ: ಕೆಎ–54/ಇ–1201 ವಾಹನದಲ್ಲಿ ದಿನಾಂಕ:25–03–2010 ರಂದು ಅಕ್ರಮವಾಗಿ ಮದ್ಯಸಾರಯುಕ್ತ ದ್ರವವನ್ನು ಹೊಂದಿ ಸಾಗಾಣಿಕೆ ಮಾಡಿರುವುದು ಮೇಲ್ನೋಟಕ್ಕೆ ಸಾಬೀತಾಗಿರುತ್ತದೆ. ಈ ಪ್ರಕರಣ ದಾಖಲಾಗಿ ಈಗಾಗಲೇ ಸುಮಾರು (3) ತಿಂಗಳುಗಳಿಗೂ ಹೆಚ್ಚು ಕಾಲ ಕಳೆದರೂ ಸಹ ಜಪ್ತಿಯಾದ ವಾಹನವು ತನ್ನದೆಂದಾಗಲೀ, ಈ ಬಗ್ಗೆ ತಾನು ವಿಚಾರಣೆ ನಡೆಸುತ್ತೇನೆ ಎಂದಾಗಲೀ ಯಾರೊಬ್ಬರೂ ಇಂದಿನವರೆವಿಗೂ ಖುದ್ದಾಗಿಯಾಗಲೀ, ಅಥವಾ ತನ್ನ ವಕೀಲರ ಮೂಲಕವಾಗಲೀ ಅರ್ಜಿಯನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುವುದಿಲ್ಲ. ವಾಹನದ ಮಾಲೀಕರಿಗೆ ಸಾಕಷ್ಟು ದಿನಗಳ ಕಾಲಾವಕಾಶವನ್ನು ನೀಡಿದಾಗಲೂ ಸಹ ಈ ಪ್ರಾಧಿಕಾರದಲ್ಲಿ ತನ್ನ ಹಕ್ಕನ್ನು ಸ್ಥಾಪಿಸದೇ ಇರುವುದರಿಂದ, ಸದರಿಯವರು ತನ್ನ ಮೇಲೆ ಹೊರಿಸಿರುವ ಆರೋಪವನ್ನು ಪರೋಕ್ಷವಾಗಿ ಒಪ್ಪಿಕೊಂಡಂತಾಗಿದೆ. ಅಲ್ಲದೇ ಈ ಘಟನೆಯು ಸಂಭವಿಸಿದ ದಿನದಂದು ವಾಹನವು ಯಾರ ವಶದಲ್ಲಿತ್ತೋ ಅವರಿಗೆ ಅಥವಾ ವಾಹನದ ಮಾಲೀಕರಿಗೆ/ಏಜೆಂಟರ ಗಮನಕ್ಕೆ ಬಾರದೇ ಮತ್ತು ಅವರುಗಳು ಶಾಮೀಲಾಗದೇ ಹಾಗೂ ಅವರೆಲ್ಲರಿಗೂ ಅರಿವಿಲ್ಲದೇ ಈ ಘಟನೆ ನಡೆದಿದೆ ಎಂಬುದನ್ನು ತೃಪ್ತಿಕರವಾಗಿ ಈ ಪ್ರಾಧಿಕಾರದಲ್ಲಿ ನಿರೂಪಿಸಿರುವುದಿಲ್ಲ. ವಾಹನವನ್ನು ಚಾಲನೆಯಿಲ್ಲದೇ ಹೆಚ್ಚು ಸಮಯ ಇಟ್ಟುಕೊಂಡಲ್ಲಿ ಹವಾಮಾನದ ವೈಪರೀತ್ಯಕ್ಕೆ ಹಾಳಾಗುವ ಮತ್ತು ಬಿಡಿ ಭಾಗಗಳು ತುಕ್ಕು ಹಿಡಿಯುವ ಸಂಭವವಿರುವುದರಿಂದ, ಸರ್ಕಾರದ ಆದಾಯದ ಹಿತದೃಷ್ಠಿಯಿಂದ ಹಾಗೂ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾದ ಅಧಿಕಾರ ಪ್ರಾಧಿಕಾರಕ್ಕೆ ದತ್ತವಾಗಿರುವುದರಿಂದ ಮೇಲ್ಕಂಡ ವಾಹನವನ್ನು ವಾರಸುದಾರರಿಲ್ಲದ ಸ್ವತ್ತು ಎಂದು ಪರಿಗಣಿಸಿ, ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿದೆ ಎಂದು ಅಭಿಪ್ರಾಯಪಟ್ಟು ಈ ಕೆಳಕಂಡ ಆದೇಶ.

**ಅದೇಶ ಸಂಖ್ಯೆ: ಡಿಟಿಸಿಆರ್/526/2009–10, ದಿನಾಂಕ:19ನೇ ಜುಲೈ, 2010**

ಡಾಃ ವೈ.ಮಂಜುನಾಥ, ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ (ಪ್ರಭಾರ) ಮಂಡ್ಯ ಜಿಲ್ಲೆ, ಮಂಡ್ಯ ಆದ ನಾನು ಕರ್ನಾಟಕ ಅಬಕಾರಿ ಕಾಯ್ದೆ 1965 ರ ಕಲಂ 43 (ಸಿ) ಅಡಿಯಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ ಆರಕ್ಷಕ ಉಪ ನಿರೀಕ್ಷಕರು, ವಿಶೇಷ ಪೋಲೀಸ್ ಠಾಣೆ, ಅಬಕಾರಿ ಜಾರಿ ಮತ್ತು ಲಾಟರಿ ನಿಷೇಧ ಘಟಕ, ಮಂಡ್ಯ ಇವರ ಅಪರಾಧ ಸಂಖ್ಯೆ:10/2010, ದಿನಾಂಕ:25–03–2010 ರ ಪ್ರಕರಣದಲ್ಲಿ ಜಪ್ತುಪಡಿಸಿರುವ ಟಿ.ವಿ.ಎಸ್ ಸ್ಟಾರ್ ಸಿಟಿ ಬೈಕ್ ಸಂಖ್ಯೆ: ಕೆಎ–54/ಇ–1201 ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ಈ ಆದೇಶವನ್ನು ಇಂದು ಅಂದರೆ 2010 ನೇ ಇಸವಿ ಜುಲೈ ತಿಂಗಳ 19 ನೇ ತಾರೀಖಿನಂದು ವಿಷಯ ನಿರ್ವಾಹಕರಿಗೆ ಉಕ್ತ ಲೇಖನ ನೀಡಿ, ಗಣಕಯಂತ್ರದಲ್ಲಿ ಬೆರಳಚ್ಚು ಮಾಡಿಸಿದ ಪ್ರತಿಯಲ್ಲಿನ ತಪ್ಪುಗಳನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಅಧಿಕೃತ ಅಧಿಕಾರಿ ಹಾಗೂ
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್,
ಮಂಡ್ಯ ಜಿಲ್ಲೆ, ಮಂಡ್ಯ.

ಪಿ.ಆರ್.1129

**ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಮಂಡ್ಯ ಜಿಲ್ಲೆ, ಮಂಡ್ಯ ಇವರ ನ್ಯಾಯಾಲಯದಲ್ಲಿ.**

**ಡಿಟಿಸಿಆರ್/386/2009–10 ದಿನಾಂಕ:19ನೇ ಜುಲೈ, 2010**

ಆರಕ್ಷಕ ನಿರೀಕ್ಷಕರು, ವಿಶೇಷ ಪೋಲೀಸ್ ಠಾಣೆ, ಅಬಕಾರಿ ಜಾರಿ ಮತ್ತು ಲಾಟರಿ ನಿಷೇಧ ಘಟಕ, ಮಂಡ್ಯ ಇವರ ಅಪರಾಧ ಸಂಖ್ಯೆ:16/2009, ದಿನಾಂಕ:19–12–2009.

**ಉಪಸ್ಥಿತರು:** ಡಾ: ವೈ.ಮಂಜುನಾಥ
ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, (ಪ್ರಭಾರ)
ಮಂಡ್ಯ ಜಿಲ್ಲೆ, ಮಂಡ್ಯ.

| **ಪಿರ್ಯಾದುದಾರರು** | **ಆರೋಪಿಗಳು.** |
|---|---|
| ಆರಕ್ಷಕ ನಿರೀಕ್ಷಕರು<br>ವಿಶೇಷ ಪೋಲೀಸ್ ಠಾಣೆ<br>ಅಬಕಾರಿ ಜಾರಿ ಮತ್ತು ಲಾಟರಿ ನಿಷೇಧ ಘಟಕ, ಮಂಡ್ಯ | 1) ಶ್ರೀನಿವಾಸ ಬಿನ್ ಲೇಟ್ ಕೊಂಡಯ್ಯ, ಕರಿಘಟ್ಟ ಬೀದಿ, ಗಂಜಾಂ, ಶ್ರೀರಂಗಪಟ್ಟಣ ತಾಲ್ಲೂಕು.<br>2) ಮತ್ತೊಬ್ಬ ಆರೋಪಿಯ ಹೆಸರು ಮತ್ತು ವಿಳಾಸ ತಿಳಿಯಬೇಕಾಗಿದೆ. |

**ಪ್ರಕರಣದ ಮುಖ್ಯಾಂಶಗಳು**

ದಿನಾಂಕ:19–12–2009 ರಂದು ಬೆಳಿಗ್ಗೆ 06–00 ರ ಸಮಯದಲ್ಲಿ ಶ್ರೀರಂಗಪಟ್ಟಣ ತಾಲ್ಲೂಕಿನ ಶ್ರೀನಿವಾಸ ಅಗ್ರಹಾರದ ಬಳಿ ಇರುವ ಕರಿಘಟ್ಟದ ಬೆಟ್ಟದ ಕೂಡು ರಸ್ತೆಯ ಬಳಿ ಅಕ್ರಮವಾಗಿ 146.880 ಲೀ ನಕಲಿ ಮದ್ಯ ಮತ್ತು ನಕಲಿ ಎಕ್ಸೈಸ್ ಲೇಬಲ್‌ಗಳನ್ನು ಬಜಾಜ್ ಚೇತಕ್ ಸ್ಕೂಟರ್ ಸಂಖ್ಯೆ: ಕೆಎ–17/ಜೆ–6258 ಮತ್ತು ಕವಾಸಕಿ ಬಜಾಜ್ ಬೈಕ್ ಸಂಖ್ಯೆ: ಕೆಎ–17/ಕೆ–6380 ವಾಹನಗಳಲ್ಲಿ ಹೊಂದಿ ಸಾಗಾಣಿಕೆ ಮಾಡುತ್ತಿದ್ದುದನ್ನು ಪತ್ತೆಮಾಡಿದ ಪಿರ್ಯಾದುದಾರರು ಈ ಅಕ್ರಮವು ಕರ್ನಾಟಕ ಅಬಕಾರಿ ಕಾಯ್ದೆ 1965 ರ ಕಲಂ 14,32,34,38 (ಎ) ಮತ್ತು 43 (ಎ) ರ ರೀತ್ಯಾ ಅಪರಾಧವಾದ್ದರಿಂದ ಈ ಬಗ್ಗೆ ಅಪರಾಧ ಸಂಖ್ಯೆ:16/2009 ರಂತೆ ಮೊಕದ್ದಮೆ ಯನ್ನು ದಾಖಲು ಮಾಡಿರುತ್ತಾರೆ. ಹಾಗೂ ಈ ಪ್ರಾಧಿಕಾರದ ಪೂರ್ವಾನುಮತಿಯಂತೆ ಜಪ್ತುಪಡಿಸಿಕೊಂಡಿರುವ ಸ್ವತ್ತುಗಳನ್ನು ಅಬಕಾರಿ ನಿರೀಕ್ಷಕರು, ಶ್ರೀರಂಗಪಟ್ಟಣ ವಲಯ ಇವರಿಗೆ ಹಸ್ತಾಂತರಿಸಿರುತ್ತಾರೆ.

ಬಜಾಜ್ ಚೇತಕ್ ಸ್ಕೂಟರ್ ಸಂಖ್ಯೆ: ಕೆಎ–17/ಜೆ–6258 ವಾಹನಕ್ಕೆ ಸಂಬಂಧಪಟ್ಟಂತೆ ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ದಾವಣಗೆರೆ ಇವರು ನೀಡಿರುವ "ಬಿ" ವಹಿಯ ಪರಿಶೀಲನೆಯಿಂದ ಶ್ರೀ ಬಸವರಾಜ್ ಬಿನ್ ಯಲ್ಲಪ್ಪ, ನಂ.7/1ಬಿ, ಚಿಕ್ಕನಹಳ್ಳಿ, ಬೆತೂರು ಅಂಚೆ, ದಾವಣಗೆರೆ ಜಿಲ್ಲೆ ಇವರು ವಾಹನದ ಮಾಲೀಕರೆಂಬುದು ತಿಳಿದುಬಂದಿದ್ದು ಸದರಿಯವರಿಗೆ ದಿನಾಂಕ:30–03–2010 ರಂದು ಕರ್ನಾಟಕ ಅಬಕಾರಿ ಕಾಯ್ದೆ 1965 ರ ಕಲಂ 43 (ಬಿ) ರನ್ವಯ ಕಾರಣ ಕೇಳುವ ನೋಟೀಸ್‌ನ್ನು ನೊಂದಣಿ ಅಂಚೆಯ ಮೂಲಕ ನೀಡಲಾಗಿತ್ತು. ನೊಂದಣಿ ಅಂಚೆ ಮೇಲ್ಕಂಡ ವಿಳಾಸದಲ್ಲಿ ಸ್ವೀಕೃತಿಯಾಗಿರುತ್ತದೆ.

ಕವಾಸಕಿ ಬಜಾಜ್ ಬೈಕ್ ಸಂಖ್ಯೆ: ಕೆಎ–17/ಕೆ–6380 ವಾಹನಕ್ಕೆ ಸಂಬಂಧಪಟ್ಟಂತೆ ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ದಾವಣಗೆರೆ ಇವರು ನೀಡಿರುವ "ಬಿ" ವಹಿಯ ಪರಿಶೀಲನೆಯಿಂದ ಶ್ರೀ ಬಿ.ನಾಗೇಂದ್ರಪ್ಪ ಬಿನ್ ಬಸಪ್ಪ ಬಣಕಾರ್, ಸೋಮ್‌ಶಿಪುರ, ಬೆಳ್ಳೂಡಿ ಪೇಟೆ, ಹರಿಹರ, ದಾವಣಗೆರೆ ಜಿಲ್ಲೆ ಇವರು ವಾಹನದ ಮಾಲೀಕರೆಂಬುದು ತಿಳಿದುಬಂದಿದ್ದು ಸದರಿಯವರಿಗೆ ದಿನಾಂಕ:30–03–2010 ರಂದು ಕರ್ನಾಟಕ ಅಬಕಾರಿ ಕಾಯ್ದೆ 1965 ರ ಕಲಂ 43 (ಬಿ) ರನ್ವಯ ಕಾರಣ ಕೇಳುವ ನೋಟೀಸ್‌ನ್ನು ನೊಂದಣಿ ಅಂಚೆಯ ಮೂಲಕ ನೀಡಲಾಗಿತ್ತು. ನೊಂದಣಿ ಅಂಚೆ ಮೇಲ್ಕಂಡ ವಿಳಾಸದಲ್ಲಿ ಸ್ವೀಕೃತಿಯಾಗದೇ ಹಿಂತಿರುಗಿ ಬಂದಿರುತ್ತದೆ.

ಅಬಕಾರಿ ನಿರೀಕ್ಷಕರು, ಶ್ರೀರಂಗಪಟ್ಟಣ ವಲಯ ಇವರು ದಿನಾಂಕ:14–05–2010 ರ ಪತ್ರದ ಮೂಲಕ ಮೇಲ್ಕಂಡ ವಾಹನದ ಮಾಲೀಕರುಗಳಿಗೆ ಕಾರಣ ಕೇಳುವ ನೋಟೀಸ್‌ನ್ನು ಜಾರಿ ಮಾಡಲು ಸಿಬ್ಬಂದಿಯನ್ನು ನಿಯೋಜಿಸಲಾಗಿತ್ತೆಂದೂ, ನೋಟೀಸ್ ಜಾರಿ ಮಾಡಲು ತೆರಳಿದ್ದಾಗ ಮೇಲ್ಕಂಡ ವಿಳಾಸಗಳಲ್ಲಿ ವಾಹನದ ಮಾಲೀಕರುಗಳು ವಾಸವಿಲ್ಲದಿರುವುದು ತಿಳಿದುಬಂದಿರುವುದಾಗಿ ತಿಳಿಸಿ, ಮುಂದಿನ ಕ್ರಮ ಕೈಗೊಳ್ಳಲು ಕೋರಿರುತ್ತಾರೆ.

ದಾಖಲಾತಿಗಳನ್ನು ಪರಿಶೀಲಿಸಲಾಗಿ ಪ್ರಕರಣದಲ್ಲಿ ಜಪ್ತುಪಡಿಸಿಕೊಂಡಿರುವ ಬಜಾಜ್ ಚೇತಕ್ ಸ್ಕೂಟರ್ ಸಂಖ್ಯೆ:ಕೆಎ–17/ಜೆ–6258 ಮತ್ತು ಕವಾಸಕಿ ಬಜಾಜ್ ಬೈಕ್ ಸಂಖ್ಯೆ: ಕೆಎ–17/ಕೆ–6380 ವಾಹನಗಳಲ್ಲಿ ದಿನಾಂಕ:19–12–2009 ರಂದು ಅಕ್ರಮವಾಗಿ ಮದ್ಯಸಾರಯುಕ್ತ ದ್ರವವನ್ನು ಹೊಂದಿ ಸಾಗಾಣಿಕೆ ಮಾಡಿರುವುದು ಮೇಲ್ನೋಟಕ್ಕೆ ಸಾಬೀತಾಗಿರುತ್ತದೆ. ಈ ಪ್ರಕರಣ ದಾಖಲಾಗಿ ಈಗಾಗಲೇ ಸುಮಾರು (6) ತಿಂಗಳುಗಳಿಗೂ ಹೆಚ್ಚು ಕಾಲ ಕಳೆದರೂ ಸಹ ಜಪ್ತಿಯಾದ ವಾಹನಗಳನ್ನು ತನ್ನದೆಂದಾಗಲೀ, ಈ ಬಗ್ಗೆ ತಾನು ವಿಚಾರಣೆ ನಡೆಸುತ್ತೇನೆ ಎಂದಾಗಲೀ ಯಾರೊಬ್ಬರೂ ಇಂದಿನವರೆವಿಗೂ ಖುದ್ದಾಗಿಯಾಗಲೀ, ಅಥವಾ ತನ್ನ ವಕೀಲರ ಮೂಲಕವಾಗಲೀ ಅರ್ಜಿಯನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುವುದಿಲ್ಲ. ವಾಹನದ ಮಾಲೀಕರುಗಳಿಗೆ ಸಾಕಷ್ಟು ದಿನಗಳ ಕಾಲಾವಕಾಶವನ್ನು ನೀಡಿದಾಗಲೂ ಸಹ ಈ ಪ್ರಾಧಿಕಾರದಲ್ಲಿ ತನ್ನ ಹಕ್ಕನ್ನು ಸ್ಥಾಪಿಸದೇ ಇರುವುದರಿಂದ, ಸದರಿ ಯವರುಗಳು ತಮ್ಮ ಮೇಲೆ ಹೊರಿಸಿರುವ ಆರೋಪವನ್ನು ಪರೋಕ್ಷವಾಗಿ ಒಪ್ಪಿಕೊಂಡಂತಾಗಿದೆ. ಅಲ್ಲದೇ ಈ ಘಟನೆಯು ಸಂಭವಿಸಿದ ದಿನದಂದು ವಾಹನವು ಯಾರ ವಶದಲ್ಲಿತ್ತೋ ಅವರಿಗೆ ಅಥವಾ ವಾಹನದ ಮಾಲೀಕರಿಗೆ/ಏಜೆಂಟರ ಗಮನಕ್ಕೆ ಬಾರದೇ ಮತ್ತು ಅವರುಗಳು ಶಾಮೀಲಾಗದೇ ಹಾಗೂ ಅವರೆಲ್ಲರಿಗೂ ಅರಿವಿಲ್ಲದೇ ಈ ಘಟನೆ ನಡೆದಿದೆ ಎಂಬುದನ್ನು ತೃಪ್ತಿಕರವಾಗಿ ಈ ಪ್ರಾಧಿಕಾರದಲ್ಲಿ ನಿರೂಪಿಸಿರುವುದಿಲ್ಲ. ವಾಹನಗಳನ್ನು ಚಾಲನೆಯಿಲ್ಲದೇ ಹೆಚ್ಚು ಸಮಯ ಇಟ್ಟುಕೊಂಡಲ್ಲಿ ಹವಾಮಾನದ ವೈಪರೀತ್ಯಕ್ಕೆ ಹಾಳಾಗುವ ಮತ್ತು ಬಿಡಿ ಭಾಗಗಳು ತುಕ್ಕು ಹಿಡಿಯುವ ಸಂಭವವಿರುವುದರಿಂದ, ಸರ್ಕಾರದ ಆದಾಯದ ಹಿತದೃಷ್ಟಿಯಿಂದ ಹಾಗೂ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾದ ಅಧಿಕಾರ ಪ್ರಾಧಿಕಾರಕ್ಕೆ ದತ್ತವಾಗಿರುವುದರಿಂದ ಮೇಲ್ಕಂಡ ನಕಲಿ ಮದ್ಯ ಮತ್ತು ವಾಹನಗಳನ್ನು ವಾರಸುದಾರರಿಲ್ಲದ ಸ್ವತ್ತು ಎಂದು ಪರಿಗಣಿಸಿ, ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿವೆ ಎಂದು ಅಭಿಪ್ರಾಯಪಟ್ಟು ಈ ಕೆಳಕಂಡ ಆದೇಶ.

**ಅದೇಶ ಸಂಖ್ಯೆ: ಡಿಟಿಸಿಆರ್/386/2009–10, ದಿನಾಂಕ:19ನೇ ಜುಲೈ, 2010.**

ಡಾಃ ವೈ.ಮಂಜುನಾಥ, ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ (ಪ್ರಭಾರ) ಮಂಡ್ಯ ಜಿಲ್ಲೆ, ಮಂಡ್ಯ ಆದ ನಾನು ಕರ್ನಾಟಕ ಅಬಕಾರಿ ಕಾಯ್ದೆ 1965 ರ ಕಲಂ 43 (ಸಿ) ಅಡಿಯಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ ಆರಕ್ಷಕ ನಿರೀಕ್ಷಕರು, ವಿಶೇಷ ಪೋಲೀಸ್ ಠಾಣೆ, ಅಬಕಾರಿ ಜಾರಿ ಮತ್ತು ಲಾಟರಿ ನಿಷೇಧ ಘಟಕ, ಮಂಡ್ಯ ಇವರ ಅಪರಾಧ ಸಂಖ್ಯೆ:16/2009, ದಿನಾಂಕ:19–12–2009 ರ ಪ್ರಕರಣದಲ್ಲಿ ಜಪ್ತುಪಡಿಸಿರುವ 146.880 ಲೀ ನಕಲಿ ಮದ್ಯ (ರಾಸಾಯನಿಕ ಪರೀಕ್ಷೆಗೆ ತೆಗೆದ ಮಾದರಿ ಹೊರತು ಪಡಿಸಿ), ನಕಲಿ ಎಕ್ಸೈಸ್ ಲೇಬಲ್‌ಗಳು, ಬಜಾಜ್ ಚೇತಕ್ ಸ್ಕೂಟರ್ ಸಂಖ್ಯೆ: ಕೆಎ–17/ಜೆ–6258 ಮತ್ತು ಕವಾಸಕಿ ಬಜಾಜ್ ಬೈಕ್ ಸಂಖ್ಯೆ: ಕೆಎ–17/ಕೆ–6380 ವಾಹನಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ಈ ಆದೇಶವನ್ನು ಇಂದು ಅಂದರೆ 2010 ನೇ ಇಸವಿ ಜುಲೈ ತಿಂಗಳ 19ನೇ ತಾರೀಖಿನಂದು ವಿಷಯ ನಿರ್ವಾಹಕರಿಗೆ ಉಕ್ತ ಲೇಖನ ನೀಡಿ, ಗಣಕಯಂತ್ರದಲ್ಲಿ ಬೆರಳಚ್ಚು ಮಾಡಿಸಿದ ಪ್ರತಿಯಲ್ಲಿನ ತಪ್ಪುಗಳನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಅಧಿಕೃತ ಅಧಿಕಾರಿ ಹಾಗೂ
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್,
ಮಂಡ್ಯ ಜಿಲ್ಲೆ, ಮಂಡ್ಯ.

ಪಿ.ಆರ್.1130

**ಪೊಲೀಸ್ ಅಧೀಕ್ಷಕರ ಕಛೇರಿ, ಕರಾವಳಿ ಕಾವಲು ಪೊಲೀಸ್, ಉಡುಪಿ**

**ಸಂಖ್ಯೆ:05/ಸಿಬ್ಬಂದಿ–1/2009–10, ದಿನಾಂಕ:16ನೇ ಜುಲೈ, 2010**

**ವಿಷಯ:** ಮಾಹಿತಿ ಹಕ್ಕು ಅಧಿನಿಯಮದಡಿ ಕರಾವಳಿ ಕಾವಲು ಪೊಲೀಸ್ ಘಟಕದ ಪ್ರಾಧಿಕಾರ ಸಮಿತಿ ರಚನೆ ಕುರಿತು.

ಮಾಹಿತಿ ಹಕ್ಕು ಅಧಿನಿಯಮ 2005 ರನ್ವಯ ಕರಾವಳಿ ಕಾವಲು ಪೊಲೀಸ್ ಘಟಕದ ಮಾಹಿತಿ ಹಕ್ಕು ಅಧಿನಿಯಮಗಳಿಗೆ ಸಂಬಂಧಿಸಿದಂತೆ ಈ ಕೆಳಕಂಡ ಅಧಿಕಾರಿ ವರ್ಗದವರ ಸಮಿತಿ ರಚಿಸಲಾಗಿದೆ.

1) ಪೊಲೀಸ್ ಅಧೀಕ್ಷಕರು – ಪ್ರಥಮ ಮೇಲ್ಮನವಿ ಅಧಿಕಾರಿ.

2) ಸಹಾಯಕ ಆಡಳಿತಾಧಿಕಾರಿ – ಸಾರ್ವಜನಿಕ ಮಾಹಿತಿ ಅಧಿಕಾರಿ.

ಆದುದರಿಂದ ಸದರಿ ಮಾಹಿತಿಯನ್ನು ಗೆಜೆಟ್‌ನಲ್ಲಿ ಪ್ರಕಟಿಸುವಂತೆ ಕೋರಿದೆ.

**ಸದಾನಂದ ಬಿ. ನಾಯಕ**
ಪೊಲೀಸ್ ಅಧೀಕ್ಷಕರು,
ಕರಾವಳಿ ಕಾವಲು ಪೊಲೀಸ್, ಉಡುಪಿ.

ಪಿ.ಆರ್.1104

## GOVERNMENT OF KARNATAKA

## DIRECTORATE OF ECONOMICS AND STATISTICS, BANGALORE-1

### Consumer Price Index Numbers For Industrial Workers

No. DES 24 PWX 2010 Month: May, 2010

State: Karnataka Base: 1987-88=100 Date :12-07-2010

| | Group/Sub-Group | Bellary | Bhadra-vathi | Davan gere | Dan deli | Gul barga | Hari har | Hassan | Man dya | Man galore | Rai chur | Tum kur |
|---|---|---|---|---|---|---|---|---|---|---|---|---|
| | 1 | 2 | 3 | 4 | 5 | 6 | 7 | 8 | 9 | 10 | 11 | 12 |
| I. | **FOOD:** (a) Cereals & Products | 666 | 606 | 659 | 542 | 541 | 563 | 581 | 665 | 514 | 657 | 682 |
| | (b) Pulses & Products | 617 | 666 | 713 | 823 | 623 | 678 | 702 | 625 | 688 | 723 | 692 |
| | (c) Oil & Fats | 312 | 288 | 295 | 302 | 297 | 309 | 292 | 330 | 250 | 308 | 278 |
| | (d) Meat, Fish & Eggs | 630 | 708 | 700 | 601 | 670 | 669 | 544 | 628 | 865 | 710 | 586 |
| | (e) Milk & Products | 407 | 413 | 487 | 467 | 423 | 481 | 446 | 510 | 424 | 446 | 403 |
| | (f) Condiments & Spices | 455 | 463 | 682 | 589 | 416 | 390 | 432 | 410 | 439 | 527 | 424 |
| | (g) Vegetables & Fruits | 597 | 626 | 667 | 669 | 506 | 505 | 643 | 534 | 512 | 511 | 743 |
| | (h) Other Food | 458 | 577 | 509 | 562 | 516 | 475 | 481 | 445 | 411 | 497 | 498 |
| | **FOOD GROUP INDEX** | **553** | **561** | **604** | **562** | **506** | **512** | **525** | **572** | **528** | **576** | **566** |
| II. | Pan, Supari, Tobacco & Intoxicants | 443 | 560 | 579 | 426 | 377 | 654 | 506 | 416 | 361 | 431 | 479 |
| III. | Fuel & Light | 407 | 383 | 462 | 530 | 463 | 399 | 387 | 455 | 336 | 603 | 319 |
| IV. | Housing | 100 | 100 | 100 | 100 | 100 | 100 | 100 | 100 | 100 | 100 | 100 |
| V. | Clothing, Bedding & Footwear | 276 | 276 | 311 | 393 | 334 | 257 | 428 | 498 | 258 | 579 | 233 |
| VI. | **MISCELLANEOUS:** (a) Medical Care | 663 | 815 | 402 | 437 | 359 | 253 | 456 | 415 | 322 | 426 | 242 |
| | (b) Education, Recreation & Amusement | 490 | 455 | 750 | 261 | 454 | 469 | 439 | 354 | 662 | 509 | 546 |

| Group/Sub-Group | Bellary | Bhadra-vathi | Davan gere | Dan deli | Gul barga | Hari har | Hassan | Man dya | Man galore | Rai chur | Tum kur |
|---|---|---|---|---|---|---|---|---|---|---|---|
| **1** | **2** | **3** | **4** | **5** | **6** | **7** | **8** | **9** | **10** | **11** | **12** |
| (c) Transport & Communication | 422 | 504 | 518 | 397 | 597 | 532 | 453 | 569 | 464 | 393 | 459 |
| (d) Personal Care & effects | 333 | 336 | 368 | 339 | 403 | 307 | 332 | 324 | 352 | 303 | 325 |
| (e) Others | 394 | 405 | 439 | 505 | 367 | 297 | 325 | 361 | 320 | 560 | 281 |
| Miscellaneous Group | 452 | 444 | 481 | 391 | 418 | 342 | 386 | 364 | 413 | 450 | 351 |
| **GENERAL INDEX** | **449** | **446** | **486** | **462** | **413** | **402** | **438** | **463** | **430** | **501** | **389** |
| To convert to Base 1960 Multiply by Linking Factor. | **7.39** | **9.19** | **8.27** | **...** | **8.26** | **8.56** | **9.25** | **7.92** | **9.31** | **...** | **...** |

For Director.

**Government of India**

**Ministry of Labour and Employment**

**Labour Bureau**

**'Cleremont', Shimla-171004**

**Dated:2nd July, 2010**

**CONSUMER PRICE INDEX NUMBERS OF INDUSTRIAL WORKERS ON BASE-2001=100**

State: Karnataka Month/Year: 05/2010

| Group/Sub-group | Bangalore | Belgaum | Hubli-Dharwar | Mercara | Mysore |
|---|---|---|---|---|---|
| **1** | **2** | **3** | **4** | **5** | **6** |
| **Food Sub-Groups** | | | | | |
| (a) Cereals & Products | 199 | 197 | 197 | 188 | 195 |
| (b) Pulses & Products | 233 | 232 | 249 | 224 | 206 |
| (c) Oils & Fats | 170 | 163 | 156 | 156 | 151 |
| (d) Meat, Fish & Eggs | 216 | 222 | 215 | 194 | 214 |
| (e) Milk & Milk Products | 180 | 156 | 140 | 166 | 181 |
| (f) Condiments & Spices | 172 | 183 | 192 | 160 | 164 |
| (g) Vegetables & Fruits | 208 | 187 | 210 | 191 | 184 |
| (h) Other Food | 197 | 188 | 181 | 190 | 190 |

| Group/Sub-group | Bangalore | Belgaum | Hubli-Dharwar | Mercara | Mysore |
|---|---|---|---|---|---|
| 1 | 2 | 3 | 4 | 5 | 6 |
| **I. FOOD GROUP** | 198 | 190 | 190 | 187 | 189 |
| II-Pan, Supari, Tobacco & Intoxicants | 177 | 159 | 167 | 147 | 183 |
| III-Fuel & Light Group | 126 | 142 | 140 | 220 | 139 |
| IV-Housing Group | 191 | 179 | 207 | 113 | 191 |
| V-Clothing, Bedding & Footwear | 116 | 120 | 127 | 129 | 113 |
| **Miscellaneous Sub-groups:** | | | | | |
| (a) Medical Care | 160 | 161 | 143 | 172 | 140 |
| (b) Education, Recreation & Amusement | 146 | 149 | 158 | 152 | 119 |
| (c) Transport & Communication | 215 | 233 | 220 | 164 | 173 |
| (d) Personal Care & effects | 152 | 148 | 154 | 142 | 147 |
| (e) Others Miscellaneous Itemes | 180 | 153 | 170 | 172 | 175 |
| **VI. Miscellaneous Group** | 174 | 168 | 168 | 155 | 148 |
| **Centre Index** | 182 | 176 | 180 | 172 | 172 |

**J.L. KAITH**

PR-1118 ECONOMIC OFFICER.

**ವಾಯುವ್ಯ ಕರ್ನಾಟಕ ರಸ್ತೆ ಸಾರಿಗೆ ಸಂಸ್ಥೆ: ಕೇಂದ್ರ ಕಛೇರಿ: ಹುಬ್ಬಳ್ಳಿ**

**ಸುತ್ತೋಲೆ**

**ಸಂಖ್ಯೆ:ವಾಕರಸಾ:ಕೇಕ:ಹು:ಸಿಬ್ಬಂದಿ:ಸಿ3:1188, ದಿನಾಂಕ:2ನೇಜುಲೈ, 2010**

**ಉಲ್ಲೇಖ:** ಕರ್ನಾಟಕ ಸರ್ಕಾರದ ಅಧಿಸೂಚನೆ ಸಂಖ್ಯೆ:ಸಾರಿಇ 47, ಸಾಸಂಇ/2010, ದಿನಾಂಕ:28-06-2010.

ಉಲ್ಲೇಖಿತ ಆದೇಶದ ಮೇರೆಗೆ, ನಾನು ವಾ.ಕ.ರ.ಸಾ.ಸಂಸ್ಥೆ, ಕೇಂದ್ರ ಕಛೇರಿ, ಹುಬ್ಬಳ್ಳಿಯಲ್ಲಿ ದಿನಾಂಕ:01.07.2010ರಂದು ವ್ಯವಸ್ಥಾಪಕ ನಿರ್ದೇಶಕ ಹುದ್ದೆಯ ಕಾರ್ಯಭಾರವನ್ನು ವಹಿಸಿಕೊಂಡಿರುತ್ತೇನೆ.

ನನ್ನ ಕಾರ್ಯ ವ್ಯಾಪ್ತಿಗೆ ಸಂಬಂಧಿಸಿದ ಎಲ್ಲಾ ಗೌಪ್ಯ ಹಾಗೂ ಅರೆ ಸರ್ಕಾರಿ ಪತ್ರಗಳನ್ನು ಈ ಕೆಳಕಂಡ ವಿಳಾಸಕ್ಕೆ ಕಳುಹಿಸಲು ಕೋರುತ್ತೇನೆ.

ಮೊಹಮ್ಮದ್ ಮೊಹಸಿನ್, ಭಾ.ಆ.ಸೇ.

ವ್ಯವಸ್ಥಾಪಕ ನಿರ್ದೇಶಕರು,

ವಾ.ಕ.ರ.ಸಾ.ಸಂಸ್ಥೆ, ಕೇಂದ್ರ ಕಛೇರಿ, ಗೋಕುಲ ರಸ್ತೆ, ಹುಬ್ಬಳ್ಳಿ-580030.

**ದೂರವಾಣಿ:**

ಕಛೇರಿ: 0836-2333058.

ಮೊಬೈಲ್ ಸಂಖ್ಯೆ: 94498-46251

ಫ್ಯಾಕ್ಸ್ ಸಂಖ್ಯೆ: 0836-2332103.

**ಮೊಹಮ್ಮದ್ ಮೊಹಸಿನ್**

ಪಿ.ಆರ್.1048 ವ್ಯವಸ್ಥಾಪಕ ನಿರ್ದೇಶಕರು.

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ಶಿವಮೊಗ್ಗ ಜಿಲ್ಲೆ

### ಅಧಿಕೃತಜ್ಞಾಪನ

**ನಂ. LND(2)CR.105/10-11, ದಿನಾಂಕ:14ನೇ ಜುಲೈ, 2010**

**ವಿಷಯ:** ಕಂದಾಯ ಭೂಮಿಯನ್ನು/ ಸರ್ಕಾರದ ಜಮೀನನ್ನು ರಕ್ಷಿಸಲು ಜಿಲ್ಲಾ ಮತ್ತು ತಾಲ್ಲೂಕು ಮಟ್ಟದ ಪ್ರಾಧಿಕಾರಗಳನ್ನು ರಚಿಸುವುದರ ಕುರಿತು.

**ಉಲ್ಲೇಖ:** 1) ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ, ಭೂಮಂಜೂರಾತಿ ವಿಭಾಗ, ಕರ್ನಾಟಕ ಸರ್ಕಾರದ ಸಚಿವಾಲಯ, ಬಹುಮಹಡಿಗಳ ಕಟ್ಟಡ, ಬೆಂಗಳೂರು ರವರ ಆದೇಶ ನಂ.ಆರ್‌ಡಿ 556 ಎಲ್‌ಜಿಪಿ 2009 ದಿನಾಂಕ:19.09.2009.

2) ಅಧ್ಯಕ್ಷರು, ಸರ್ಕಾರಿ ಜಮೀನು ಸಂರಕ್ಷಣಾ ಕಾರ್ಯಪಡೆ, 2ನೇ ಮಹಡಿ, ಜಿಲ್ಲಾಧಿಕಾರಿಗಳ ಕಛೇರಿ ಕಟ್ಟಡ, ಸಿಟಿ ಸಿವಿಲ್ ನ್ಯಾಯಾಲಯ ಆವರಣ ಹತ್ತಿರ, ಕೆ.ಜಿ. ರಸ್ತೆ, ಬೆಂಗಳೂರು ರವರ ಪತ್ರ ನಂ.ಸಿಟಿಎಫ್/18/09–10, ದಿನಾಂಕ:21.06.2010.

ಉಲ್ಲೇಖಿತ ಸರ್ಕಾರಿ ಆದೇಶದಲ್ಲಿ ಸರ್ಕಾರಿ ಭೂಮಿಗಳನ್ನು ರಕ್ಷಿಸಲು ರಾಜ್ಯ, ಜಿಲ್ಲಾ ಹಾಗೂ ತಾಲ್ಲೂಕು ಮಟ್ಟದ ಪ್ರಾಧಿಕಾರಗಳನ್ನು ರಚಿಸಲಾಗಿರುತ್ತದೆ. ಜಿಲ್ಲಾ ಮಟ್ಟದ ಪ್ರಾಧಿಕಾರಕ್ಕೆ ಸಂಬಂಧಿಸಿದಂತೆ ಅಧಿಕಾರಿಗಳನ್ನು ಒಳಗೊಂಡ ಸಮಿತಿ ರಚಿಸಲಾಗಿದೆ.

ಪ್ರಯುಕ್ತ ಜಿಲ್ಲಾ ಮಟ್ಟದ ಪ್ರಾಧಿಕಾರವು ಈ ಕೆಳಕಂಡ ಅಧಿಕಾರಿಗಳನ್ನು ಒಳಗೊಂಡ ಸಮಿತಿಯಾಗಿರುತ್ತದೆಂದು ಈ ಮೂಲಕ ಆದೇಶಿಸಿದೆ.

| | | |
|---|---|---|
| 1) | ಜಿಲ್ಲಾಧಿಕಾರಿ, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ | ಅಧ್ಯಕ್ಷರು |
| 2) | ಉಪವಿಭಾಗಾಧಿಕಾರಿಗಳು, ಶಿವಮೊಗ್ಗ ಉಪವಿಭಾಗ, ಶಿವಮೊಗ್ಗ | ಸದಸ್ಯ ಕಾರ್ಯದರ್ಶಿ |
| 3) | ಸೂಪರಿಂಟೆಂಡೆಂಟ್ ಆಫ್ ಪೊಲೀಸ್, ಶಿವಮೊಗ್ಗ ಜಿಲ್ಲೆ | ಸದಸ್ಯರು |
| 4) | ಅಧೀಕ್ಷಕ ಅಭಿಯಂತರರು, ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ, ಶಿವಮೊಗ್ಗ | ಸದಸ್ಯರು |
| 5) | ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣಾಧಿಕಾರಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ, ಶಿವಮೊಗ್ಗ. | ಸದಸ್ಯರು |
| 6) | ಉಪವಿಭಾಗಾಧಿಕಾರಿಗಳು, ಸಾಗರ ಉಪವಿಭಾಗ, ಸಾಗರ | ಸದಸ್ಯರು |
| 7) | ಉಪ ನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ಶಿವಮೊಗ್ಗ | ಸದಸ್ಯರು |
| 8) | ಅರಣ್ಯ ಸಂರಕ್ಷಣಾಧಿಕಾರಿಗಳು, ಅರಣ್ಯ ಇಲಾಖೆ, ಶಿವಮೊಗ್ಗ | ಸದಸ್ಯರು |
| 9) | ಕಾರ್ಯಪಾಲಕ ಅಭಿಯಂತರು, ಸಣ್ಣ ನೀರಾವರಿ ಇಲಾಖೆ, ಶಿವಮೊಗ್ಗ | ಸದಸ್ಯರು |
| 10) | ತಹಸೀಲ್ದಾರ್, ಶಿವಮೊಗ್ಗ, ಭದ್ರಾವತಿ, ತೀರ್ಥಹಳ್ಳಿ, ಸಾಗರ, ಸೊರಬ, ಶಿಕಾರಿಪುರ ಮತ್ತು ಹೊಸನಗರ ತಾಲ್ಲೂಕು | ಸದಸ್ಯರು |
| 11) | ಜಿಲ್ಲಾಧಿಕಾರಿಗಳ ತಾಂತ್ರಿಕ ಸಹಾಯಕರು ಮತ್ತು ಪದನಿಮಿತ್ತ ಭೂದಾಖಲೆಗಳ ಉಪ ನಿರ್ದೇಶಕರು, ಶಿವಮೊಗ್ಗ | ಆಹ್ವಾನಿತರು |
| 12) | ಆಯುಕ್ತರು, ನಗರಸಭೆ, ಶಿವಮೊಗ್ಗ, ಭದ್ರಾವತಿ ಮತ್ತು ಸಾಗರ | ಆಹ್ವಾನಿತರು |

ಉಲ್ಲೇಖ–1ರ ಸರ್ಕಾರದ ಆದೇಶದಲ್ಲಿ ತಿಳಿಸಿರುವಂತೆ ಕಾರ್ಯವನ್ನು ನಿರ್ವಹಿಸತಕ್ಕದ್ದು. ಹಾಗೂ ವರದಿಯನ್ನು ಈ ಕಾರ್ಯಾಲಯಕ್ಕೆ ಪ್ರತಿ ಮಾಹೆಯ ಬಾಬ್ತು ಸಲ್ಲಿಸಲು ನಿರ್ದೇಶಿಸಿದೆ. (ಪ್ರತಿ ತಿಂಗಳ 5ನೇ ತಾರೀಖಿನ ಒಳಗೆ)

ಜಿಲ್ಲಾಧಿಕಾರಿ,
ಶಿವಮೊಗ್ಗ ಜಿಲ್ಲೆ.

ಪಿ.ಆರ್.1120

## DEPARTMENT OF MiNES AND GEOLOGY

**Notification No.DMG/AML/ADV/2010-11, Bangalore, Dated:18th July, 2010**

It is hereby informed for mining public that the area noted below is available for re-grant under rule 59(1) of Mineral Concession Rules 1960 as under:

1) This area is available for grant to the general public from the date of notification in the official gazette for a period of 60 days.
2) The applications will be received over this area from general public, from the date of notification in the official gazette for a period of 60 days.
3) If the lost day for receipt of application happens to be public holiday or general holiday, the application will be accepted on the next working day.
4) Any applications received after 60 days from the date of notification in official gazette days will not be considered.

The sketch of the area is available for verification at the office of the Director, Department of Mines and Geology, Khanija Bhavan, Race Course Road, Bangalore-560 001 during working hours on all working days.

The prescribed applications and the sketches of the notified area can be obtained from the office of the Director, Department of Mines & Geology, Khanija Bhavan, Race Course Road, Bangalore-01 on payment of prescribed fees.

The mining public should note the availability of the area published below is subject to the clearance from the Revenue Department for mining activities and compliance of the provisions of the MM (D & R) Act, 1957, and MC Rules 1960 and all other relevant acts and rules by the applicants. In case, the areas found to consists of forest lands, the clearance from the Forest Department under Section (2) of Forest (Conservation) Act, 1980, for utilizing the area for non-forest activities should be obtained by the applicant.

Interested persons are advised to inspect the area, satisfy themselves about the availability of mineral deposits and the present status of the land there, in before making application for mining lease.

| Sl. No. | Mineral | Extent | Sy.No. | Location |
|---|---|---|---|---|
| 1. | Limestone | 1592-18 Hects. (PL-3336) | | Nirbudhihal, Jalageri, Ganganabudhihal, Karkalmatti, Halageri & Kagalagomb villages, Badami Taluk, Bagalkot District. |

Director,

PR-1167 Department of Mines & Geology.

### ವಾಣಿಜ್ಯ ತೆರಿಗೆಗಳ ಸಹಾಯಕ ಆಯುಕ್ತರು (ಜಾರಿ)–2, ದಾವಣಗೆರೆ ಇವರ ನಡಾವಳಿಗಳು

**ಉಪಸ್ಥಿತ:** ಎನ್.ಇ. ಇಟಗಿ,

ವಾಣಿಜ್ಯ ತೆರಿಗೆಗಳ ಸಹಾಯಕ ಆಯುಕ್ತರು, (ಜಾರಿ)–2, ದಾವಣಗೆರೆ.

**ವಿಷಯ:** ಕಳೆದುಹೋದ ಕಛೇರಿ ರಸೀದಿ ಪುಸ್ತಕದಲ್ಲಿನ ಉಪಯೋಗಿಸದೇ ಇರುವ ರಸೀದಿಗಳನ್ನು ರದ್ದುಪಡಿಸುವ ಕುರಿತು.

**ಪೀಠಿಕೆ:**

ಮಾನ್ಯ ವಾಣಿಜ್ಯ ತೆರಿಗೆಗಳ ಜಂಟಿ ಆಯುಕ್ತರು (ಆಡಳಿತ, ಜಾರಿ ಮತ್ತು ವಸೂಲಿ) ದಾವಣಗೆರೆ ಮತ್ತು ಬಳ್ಳಾರಿ ವಿಭಾಗ, ಬಳ್ಳಾರಿ ಇವರ ಕಛೇರಿಯಿಂದ ರಸೀದಿ ಕ್ರಮಸಂಖ್ಯೆ: 052151 ರಿಂದ 052200ರ ವರೆಗೆ (ದ್ವಿಪ್ರತಿ) ಒಳಗೊಂಡ ರಸೀದಿ ಪುಸ್ತಕ (ಸಂಖ್ಯೆ:10424) ವನ್ನು ಈ ಕಛೇರಿ ಉಪಯೋಗಕ್ಕಾಗಿ ಒದಗಿಸಲಾಗಿತ್ತು. ಈ ಕಛೇರಿಯಿಂದ ಕೈಗೊಳ್ಳಲಾದ ತನಿಖೆ ಮತ್ತಿತರ ನಡಾವಳಿಗಳಲ್ಲಿ ನಿಗದಿಪಡಿಸಿದ ಇಲಾಖಾ ತೆರಿಗೆ/ದಂಡ//ಬಡ್ಡಿ ರಾಜಿಶುಲ್ಕ ಇತ್ಯಾದಿಗಳನ್ನು ಕರದಾತರು ಪಾವತಿಸಿದುದರ ದೃಢೀಕರಣವಾಗಿ, ಸದರಿ ರಸೀದಿ ಪುಸ್ತಕವನ್ನು ದಿನಾಂಕ:27.11.2009 ರಿಂದ ಪ್ರಾರಂಭಗೊಂಡು ದಿನಾಂಕ:28.05.2010ರ ವರೆವಿಗೆ ಪುಸ್ತಕದಲ್ಲಿನ ಕ್ರ.ಸಂ.052151 ರಿಂದ 052183ರವರೆಗೆ ಒಟ್ಟು 33 ರಸೀದಿಗಳನ್ನು ಉಪಯೋಗಿಸಲಾಗಿತ್ತು ಹಾಗೂ ಕ್ರ.ಸಂ.052184 ರಿಂದ 052200 ರ ವರೆಗಿನ ಒಟ್ಟು 17 ರಸೀದಿಗಳು ದ್ವಿಪ್ರತಿಯಲ್ಲಿ ಉಪಯೋಗಿಸದೇ ಉಳಿದಿದ್ದವು.

ನಾನು, ದಿನಾಂಕ:28.05.2010ರ ಮಧ್ಯಾಹ್ನ 1.10 ಗಂಟೆ ಸಮಯದಲ್ಲಿ ಸ್ಥಳೀಯ ಆಕ್ಸಿಸ್ ಬ್ಯಾಂಕ್‌ನೊಳಗೆ ಬ್ಯಾಂಕ್ ಕಾರ್ಯ ನಿರ್ವಹಿಸಿ ಹಿಂತಿರುಗುವಷ್ಟರಲ್ಲಿ, ನನ್ನ ದ್ವಿಚಕ್ರ ವಾಹನದಲ್ಲಿ ಇಟ್ಟಿದ್ದ ಬ್ಯಾಗ್ ಹಾಗೂ ಅದರೊಳಗೆ ಇರಿಸಲಾದ ಮೇಲ್ಕಾಣಿಸಿದ ರಸೀದಿ ಪುಸ್ತಕ ಹಾಗೂ ಕಛೇರಿ ಮುಖ್ಯಸ್ಥರ ಮೊಹರು ಮತ್ತಿತರೆ ದಾಖಲೆಗಳು ಕಳೆದು ಹೋಗಿರುತ್ತವೆ. ಈ ಕುರಿತು ಸ್ಥಳೀಯ ಬಡಾವಣೆ ಪೊಲೀಸ್ ಠಾಣೆಯಲ್ಲಿ ದಿನಾಂಕ:28.05.2010ರಂದು ದೂರು ಸಲ್ಲಿಸಲಾಗಿತ್ತು. ಮತ್ತು ಕಛೇರಿ ಪ್ರಕಟಣಾ ಫಲಕದಲ್ಲಿ ಪ್ರಕಟಿಸಲಾಗಿತ್ತು. ಹಾಗೂ ದಿನಾಂಕ:29.05.2010ರಂದು ಸ್ಥಳೀಯ ದಿನಪತ್ರಿಕೆ "ಜನತಾವಾಣಿ"ಯಲ್ಲಿ ಪ್ರಕಟಪಡಿಸಿ ಕಳೆದುಹೋದ ಕಛೇರಿ ಪುಸ್ತಕ, ಮೊಹರು ಮತ್ತಿತರೆ ದಾಖಲೆ ಯಾರಿಗಾದರೂ ಸಿಕ್ಕಲ್ಲಿ ಕಛೇರಿಗೆ ತಲುಪಿಸುವಂತೆ ಕೋರಲಾಗಿತ್ತು. ಆದರೆ ಈವರೆಗೆ ಸಿಕ್ಕಿರುವುದಿಲ್ಲ. ಈ ಮಧ್ಯಂತರದಲ್ಲಿ ಕಳೆದುಹೋದ ರಸೀದಿ ಪುಸ್ತಕ ಕುರಿತು ಮಾಹಿತಿಯನ್ನು ಮಾನ್ಯ ವಾಣಿಜ್ಯ ತೆರಿಗೆ ಆಯುಕ್ತರು, ಬೆಂಗಳೂರು ಇವರಿಗೆ ಮಾನ್ಯ ವಾಣಿಜ್ಯ ತೆರಿಗೆ ಜಂಟಿ ಆಯುಕ್ತರು (ಆಡಳಿತ, ಜಾರಿ ಮತ್ತು ವಸೂಲಿ) ಬಳ್ಳಾರಿ ಇವರ ಮುಖಾಂತರ ನೀಡಲಾಗಿದೆ. ಸದರಿ ಮಾಹಿತಿಯನ್ನಾಧರಿಸಿ ಮಾನ್ಯ ವಾಣಿಜ್ಯ ತೆರಿಗೆ ಅಪರ ಆಯುಕ್ತರು (ಕೇಂ.ಕ)–1, ವಾಣಿಜ್ಯ ತೆರಿಗೆ ಆಯುಕ್ತರ ಕಛೇರಿ, ಬೆಂಗಳೂರು ಇವರು ಕಳೆದುಹೋದ ರಸೀದಿ ಪುಸ್ತಕದಲ್ಲಿನ ಉಪಯೋಗಿಸದೇ ಇರುವ ರಸೀದಿಗಳನ್ನು ರದ್ದುಪಡಿಸಿ ಕಛೇರಿ ಆದೇಶ ಹೊರಡಿಸುವಂತೆ ಸೂಚಿಸಿರುತ್ತಾರೆ. ಈ ಹಿನ್ನೆಲೆಯಲ್ಲಿ ಈ ಕೆಳಕಂಡ ಆದೇಶ ಹೊರಡಿಸಿದೆ.

**ಕಛೇರಿ ಆದೇಶ ಸಂಖ್ಯೆ: ವಾತೆಸಆ (ಜಾರಿ–2/ಸಿಬ್ಬಂದಿ–/2010–11, ದಿನಾಂಕ:28ನೇ ಜೂನ್, 2010**

ಮೇಲ್ಕಾಣಿಸಿದ ಕಾರಣಗಳಿಂದಾಗಿ ಈ ಕಛೇರಿಗೆ ಒದಗಿಸಲಾದ ಕ್ರ.ಸಂ. 052151 ರಿಂದ 052200 ರ ವರೆಗಿನ ರಸೀದಿಗಳನ್ನೊಳಗೊಂಡ ರಸೀದಿ ಪುಸ್ತಕವು ಕ್ರ.ಸಂ.10424) ದಿನಾಂಕ:28.05.2010ರಂದು ಕಳೆದುಹೋಗಿರುತ್ತದೆ. ಸದರಿ ರಸೀದಿ ಪುಸ್ತಕದಲ್ಲಿನ ಉಪಯೋಗಿಸದೇ ಇರುವ 052184 ರಿಂದ 052200ರ ವರೆಗಿನ ಕ್ರಮಸಂಖ್ಯೆಯ ರಸೀದಿಗಳನ್ನು ಅಸಿಂಧು ಎಂದು ನಿರ್ಧರಿಸಿ ತಕ್ಷಣ ಜಾರಿಗೆ ಬರುವಂತೆ ರದ್ದುಪಡಿಸಲಾಗಿದೆ.

**ಎನ್.ಇ. ಇಟಗಿ**

ಪಿ.ಆರ್.1033

ವಾಣಿಜ್ಯ ತೆರಿಗೆಗಳ ಸಹಾಯಕ
ಆಯುಕ್ತರು, (ಜಾರಿ–2), ದಾವಣಗೆರೆ.

## ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಗಳ ಕಛೇರಿ, ದಾವಣಗೆರೆ ಜಿಲ್ಲೆ, ದಾವಣಗೆರೆ

### ಅಧಿಕೃತ ಜ್ಞಾಪನಾ ಪತ್ರ

**ಸಂಖ್ಯೆ: ಜಿಆದಾ/ಮಾಹಿತಿಹಕ್ಕು/06/2010–11, ದಿನಾಂಕ:21ನೇ ಜೂನ್, 2010**

**ವಿಷಯ:** ಸಾರ್ವಜನಿಕ ಮಾಹಿತಿ ಅಧಿಕಾರಿ ಹಾಗೂ ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿಗಳನ್ನಾಗಿ ನೇಮಕಾತಿಗೊಳಿಸುವ ಬಗ್ಗೆ.

ಮೇಲಿನ ವಿಷಯಕ್ಕೆ ಸಂಬಂಧಿಸಿದಂತೆ ಸಾರ್ವಜನಿಕರಿಗೆ ಮಾಹಿತಿಯು ಸುಲಭವಾಗಿ ದೊರಕುವಂತೆ ಮಾಡುವ ಸಲುವಾಗಿ ಮತ್ತು ಮಾಹಿತಿ ಹಕ್ಕು ಅಧಿನಿಯಮ 2005ರನ್ವಯ ಸರಳೀಕರಣ ಮಾಡಬಹುದಾದ ನಿಯಮಾನುಸಾರ ತಕ್ಷಣದಿಂದ ಜಾರಿಗೆ ಬರುವಂತೆ ಈ ಕೆಳಕಂಡಂತೆ ಸಾರ್ವಜನಿಕ ಮಾಹಿತಿ ಅಧಿಕಾರಿ ಹಾಗೂ ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿಗಳನ್ನಾಗಿ ಈ ಕೆಳಕಂಡ ಅಧಿಕಾರಿಗಳನ್ನು ನೇಮಕಾತಿಗೊಳಿಸಿ ಆದೇಶಿಸಿದೆ.

| | | | |
|---|---|---|---|
| 1) | ಸಾರ್ವಜನಿಕ ಮಾಹಿತಿ ಅಧಿಕಾರಿ | ಜಿಲ್ಲಾ ಯೋಜನಾ ನಿರ್ವಹಣಾಧಿಕಾರಿಗಳು– ಎನ್.ಆರ್.ಹೆಚ್.ಎಂ.ವಿಭಾಗ, ವಿನಾಯಕ ಕಾಂಪ್ಲೆಕ್ಸ್, ಬಾಪೂಜಿ ಆಸ್ಪತ್ರೆ ರಸ್ತೆ, ದಾವಣಗೆರೆ–577004. | ಎನ್.ಆರ್.ಹೆಚ್.ಎಂ. ವಿಭಾಗಕ್ಕೆ ಸಂಬಂಧಿಸಿದ ವಿಷಯಗಳು |
| 2) | ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ | ಕಛೇರಿ ಅಧೀಕ್ಷಕರು –ಅದೇ– | –ಅದೇ– |
| 1) | ಸಾರ್ವಜನಿಕ ಮಾಹಿತಿ ಅಧಿಕಾರಿ | ಜಿಲ್ಲಾ ಆರ್.ಸಿ.ಹೆಚ್. ಅಧಿಕಾರಿಗಳು ಜಿಲ್ಲಾ ಆರೋಗ್ಯ ಮತ್ತು ಕು.ಕ. ಅಧಿಕಾರಿಗಳ ಕಛೇರಿ, ವಿನಾಯಕ ಕಾಂಪ್ಲೆಕ್ಸ್, ಬಾಪೂಜಿ ಆಸ್ಪತ್ರೆ ರಸ್ತೆ, ದಾವಣಗೆರೆ–577004. | ಆರ್.ಸಿ.ಹೆಚ್. ವಿಭಾಗಕ್ಕೆ ಸಂಬಂಧಿಸಿದ ವಿಷಯಗಳು |
| 2) | ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ | ಕಛೇರಿ ಅಧೀಕ್ಷಕರು, ಎನ್.ಆರ್.ಹೆಚ್.ಎಂ. ವಿಭಾಗ, ವಿನಾಯಕ ಕಾಂಪ್ಲೆಕ್ಸ್, ಬಾಪೂಜಿ ಆಸ್ಪತ್ರೆ ರಸ್ತೆ, ದಾವಣಗೆರೆ–577004. | –ಅದೇ– |

ಜಿಲ್ಲಾ ಆರೋಗ್ಯ ಮತ್ತು ಕುಟುಂಬ
ಕಲ್ಯಾಣ ಅಧಿಕಾರಿಗಳು, ದಾವಣಗೆರೆ
ಜಿಲ್ಲೆ, ದಾವಣಗೆರೆ.

ಪಿ.ಆರ್.1126

## COMMERCIAL TAXES DEPARTMENT

## PROCEEDINGS OF THE COMMISSIONER OF COMMERCIAL TAXES, (KARNATAKA), BANGALORE-CLARIFICATION UNDER SECTION 59(4) OF THE KARNATAKA VALUE ADDED TAX ACT, 2003

**Sub:** KVAT Act, 2003- Clarification under Section 59(4) regarding the rate of tax applicable on (1) Disposable electrodes; (2) patient cable for ECG machine; and (3) rechargeable battery for ECG machine-reg.

**Ref:** Application Dated:13.04.2010 of Sri Arvind V. Patil, Proprietor, Span Distributors, # 47/25, (New No.2012), 2nd Floor, 19th Main, Rajajinagar, Bangalore-560 010.

In the application cited above, Sri Arvind V. Patil, Proprietor, Span Distributors, # 47/25, (New No.2012), 2nd Floor, 19th Main, Rajajinagar, Bangalore-560010, has sought clarification regarding the rate of tax applicable on (1) disposable electrodes; (2) patient cable for ECG machine; and (3) rechargeable battery for ECG machine.

2. Section 59(4) of the Karnataka Value Added Tax Act, 2003 empowers the Commissioner of Commercial Taxes to clarify the rate of tax payable under the Act, if he considers it necessary or expedient so to do, for the purpose of maintaining uniformity in the work of assessments and collection of revenue. It is examined and found that the clarification requested by the petitioner is within the scope of the aforesaid provision and it is necessary that the clarification be issued for the purpose of maintaining uniformity in the work of assessments and collection of revenue.

3. Hence the following clarification is issued.

**Clarification No.CLR.CR.16/10-11, Dated:23rd June, 2010**

It is hereby clarified that the rates of tax applicable on the following goods are as indicated under:

| Sl. No. | Goods | Rate of tax/ Section |
|---|---|---|
| 1. | Disposable Electrodes | 13.5% from 01.04.2010 under Section 4(1)(b) of the KVAT Act, 2003 |
| 2. | Patient Cable for ECG Machine | 13.5% from 01.04.2010 under Section 4(1)(b) of the KVAT Act, 2003 |
| 3. | Rechargeable battery for ECG Machine | 13.5% from 01.04.2010 under Section 4(1)(b) of the KVAT Act, 2003. |

**PRADEEP SINGH KHAROLA**

PR-1035

Commissioner of Commercial Taxes,
(Karnataka), Bangalore.

**ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ**

**ಅಧಿಸೂಚನೆ**

**ಸಂಖ್ಯೆ: ಆಕುಕ 168 ಹೆಚ್‌ಎಸ್‌ಹೆಚ್ 2010, ಬೆಂಗಳೂರು, ದಿನಾಂಕ:18ನೇ ಜೂನ್, 2010**

**ವಿಷಯ:** ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ವೈದ್ಯಾಧಿಕಾರಿಗಳನ್ನು ಒಂದು ವರ್ಷದ ಎಂಪಿಹೆಚ್ ಕೋರ್ಸಿಗೆ ನಿಯೋಜಿಸುವ ಬಗ್ಗೆ.

**ಉಲ್ಲೇಖ:** ಆಯುಕ್ತರು, ಆಕುಕ ಸೇವೆಗಳು, ಬೆಂಗಳೂರು ಇವರ ಪತ್ರ ಸಂಖ್ಯೆ: ಜೆಆರ್‌ಜ (ಎಂ)17/2010–11, ದಿನಾಂಕ:17.06.2010.

ಮೇಲಿನ ಉಲ್ಲೇಖಿತ ಪತ್ರದಲ್ಲಿ ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು ಇವರು ಪ್ರಸ್ತಾವನೆ ಸಲ್ಲಿಸಿ, TATA Institute of Social Sciences, Mumbai ಇಲ್ಲಿ ಒಂದು ವರ್ಷದ ಎಂಪಿಹೆಚ್ ಕೋರ್ಸ್‌ಗಾಗಿ ಇಲಾಖೆಯಲ್ಲಿ ಕಾರ್ಯನಿರ್ವಹಿಸುತ್ತಿರುವ ಇಬ್ಬರು ವೈದ್ಯಾಧಿಕಾರಿಗಳು ಆಯ್ಕೆಗೊಂಡಿದ್ದು, ಅವರುಗಳನ್ನು ಕೋರ್ಸ್‌ಗೆ ನಿಯೋಜಿಸುವಂತೆ ಕೋರಿರುತ್ತಾರೆ. ಪ್ರಸ್ತಾವನೆಯನ್ನು ಪರಿಶೀಲಿಸಿ, ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ಅಪೆಂಡಿಕ್ಸ್–II 'ಎ' ನಿಯಮ I ರನ್ವಯ TATA Institute of Social Sciences, Mumbai ಇಲ್ಲಿ ಜೂನ್ 2010 ರಿಂದ ಪ್ರಾರಂಭವಾಗಲಿರುವ ಒಂದು ವರ್ಷದ MPH course in Health Policy, Economics and Finance ವಿಷಯದಲ್ಲಿ ಸೇವಾನಿರತ ವ್ಯಾಸಂಗಕ್ಕೆ ಈ ಕೆಳಕಂಡ ವೈದ್ಯಾಧಿಕಾರಿಗಳನ್ನು ನಿಯೋಜಿಸಲಾಗಿದೆ.

1) Dr. N.K. Venkatesh, District Malaria Officer, Hassan.

2) Dr. Anand, Medical Officer, District TB center, Mysore.

ನಿರ್ದೇಶಕರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಇವರು ಕರ್ನಾಟಕ ಸರ್ಕಾರಿ ಸೇವಾ ನಿಯಮಗಳಲ್ಲಿ ನಿಗದಿಪಡಿಸಿರುವಂತೆ ನಮೂನೆ–19 ಮತ್ತು 19–ಎ ರನ್ವಯ ಅಫಿಡವಿಟ್ ಮತ್ತು ಪೆನಾಲ್ಟಿ ಬಾಂಡ್ ಅನ್ನು ಪಡೆದು ನಂತರ ಕೋರ್ಸಿಗೆ ಆಯ್ಕೆಯಾಗಿರುವ ಸೇವಾನಿರತ ವೈದ್ಯಾಧಿಕಾರಿಗಳನ್ನು ಕರ್ತವ್ಯದಿಂದ ಬಿಡುಗಡೆ ಮಾಡತಕ್ಕದ್ದು.

ಸದರಿ ಸೇವಾನಿರತ ವೈದ್ಯಾಧಿಕಾರಿಗಳಿಗೆ ಪ್ರತಿನಿಯೋಜನಾ ಸೌಲಭ್ಯ ಮಂಜೂರಾತಿಗಾಗಿ ಸಂಬಂಧಿಸಿದಂತೆ ಪರಿಶೀಲಿಸಿ ಪ್ರತ್ಯೇಕವಾಗಿ ಕ್ರಮಕೈಗೊಳ್ಳಲಾಗುವುದು.

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ: ಆಇ 02 ಎಸ್‌ಆರ್‌ಎ 2008 ದಿನಾಂಕ:05.06.2008ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಐ. ಹೇಮನಾಥ್**

ಪಿ.ಆರ್.1040

ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ಸೇವೆಗಳು–1)

**COMMERCIAL TAX DEPARTMENT**

**NOTIFICATION**

**No.137/2010-11, Bangalore, Dated:25th June, 2010**

In pursuance of the provision contained in Sub Rule (2) of Rule 12 of CST Act (Karnataka) 1956, it is hereby notified for general informations that, the declaration in Form "C" shown below are declared to be obsolute and invalid.

| Sl. No. | Name of the Authority issuing Declaration Form | Name & Address of the dealer to whom declaration Forms are issued by the Dept. with TIN/CST No. | Name of the declaration Forms and Number (including Code No.) of the declaration forms declared as obsolute & Invalid | Date of issue to the Dealer | Whether lost/ Destroyed/ Stolen | Remarks |
|---|---|---|---|---|---|---|
| 1. | L.V.O-160 Bangalore. | M/s. L.K. Foot-ware No.07, Guptha Quarters, 13 KM, Doddakallasandra, Kanakapura Main Road, Bangalore-560062, TIN:29930376588 | "C" Forms TCK-R-2866339 TCK-R- 2866340 TCK-R-2866341 TCK-R-2866342 TCK-R-2866343 TCK-R-2866344 TCK-R-2866345 TCK-R-2866346 TCK-R-2866347 TCK-R-2866348 | 24.03.2006 | Lost in their custody while in transit | The lost "C" Forms declared obsolute & invalid |

**K.S. JOTHY**

Assistant Commissioner of Commercial Taxes,

PR-1064

(L.V.O.120) M.M. Trust,

Chamarajapet, Bangalore.

**ಸಮಾಜ ಕಲ್ಯಾಣ ಇಲಾಖೆ**

**ಅಧಿಸೂಚನೆ**

**ಸಂಖ್ಯೆ: ಸಕಇ 09 ಬಿಇಟಿ 2010, ಬೆಂಗಳೂರು, ದಿನಾಂಕ:30ನೇ ಜೂನ್, 2010**

ದಿನಾಂಕ:01.01.2009ರಂದು ಚಾಲ್ತಿಯಲ್ಲಿರುವಂತೆ ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯ ಸಹಾಯಕ ನಿರ್ದೇಶಕರು/ ಜಿಲ್ಲಾ ಹಿಂದುಳಿದ ವರ್ಗಗಳ ಅಧಿಕಾರಿಗಳ ಅಂತಿಮ ಪದಕ್ರಮ ಪಟ್ಟಿಯನ್ನು ಈ ಕೆಳಗಿನಂತೆ ಪ್ರಕಟಿಸಲಾಗಿದೆ.

| ಕ್ರ. ಸಂ. | ಅಧಿಕಾರಿಗಳ ಹೆಸರು | ಜನ್ಮ ದಿನಾಂಕ | ಸೇವೆಗೆ ಸೇರಿದ ದಿನಾಂಕ | ಹಾಲಿ ಹುದ್ದೆಯಲ್ಲಿ ಕೆಲಸ ನಿರ್ವಹಿಸುತ್ತಿರುವ ದಿನಾಂಕ | ಷರಾ |
|---|---|---|---|---|---|
| 1. | ಅರವಿಂದ ಎನ್. ಪ್ರಭಾ | 18.10.1956 | 03.02.1984 | 03.02.1984 | |
| 2. | ಪ್ರಭುಸ್ವಾಮಿ | 05.02.1955 | 01.02.1984 | 01.02.1984 | |

| ಕ್ರ. ಸಂ. | ಅಧಿಕಾರಿಗಳ ಹೆಸರು | ಜನ್ಮ ದಿನಾಂಕ | ಸೇವೆಗೆ ಸೇರಿದ ದಿನಾಂಕ | ಹಾಲಿ ಹುದ್ದೆಯಲ್ಲಿ ಕೆಲಸ ನಿರ್ವಹಿಸುತ್ತಿರುವ ದಿನಾಂಕ | ಷರಾ |
|---|---|---|---|---|---|
| 3. | ಶಿವಣ್ಣ | 02.02.1956 | 01.02.1984 | 01.02.1984 | |
| 4. | ಬಿ. ಗಿರೀಶ್ | 20.06.1957 | 30.01.1984 | 30.01.1984 | |
| 5. | ಪಿ.ಎ. ಗಣಪತಿ | 19.06.1955 | 01.02.1984 | 01.02.1984 | |
| 6. | ಎಸ್.ಇ. ದೇವಯ್ಯ | 04.06.1954 | 05.11.1984 | 05.11.1984 | |
| 7. | ಎಸ್.ಟಿ. ದೇವರಾಜು | 23.03.1962 | 01.03.1990 | 10.09.1998 | |
| 8. | ಟಿ.ಬಿ. ಬಿರಾದಾರ್ (ನಿವೃತ್ತಿ) | 01.06.1950 | 15.12.1975 | 13.04.1999 | |
| 9. | ಹೆಚ್.ಎಂ. ಪೂಜಾರ್ | 12.04.1955 | 20.08.1982 | 13.04.1999 | |
| 10. | ಲಕ್ಷ್ಮಾನಾಯಕ್ | 22.07.1956 | 06.08.1980 | 23.07.1999 | |
| 11. | ಜಿ. ಜಗದೀಶ್ | 25.05.1970 | 18.07.1996 | 01.01.2004 | |
| 12. | ಕೆ.ಜಿ. ತಿಮ್ಮಾರೆಡ್ಡಿ | 28.11.1951 | 05.12.1975 | 10.02.2004 | |
| 13. | ಡಾ:ಸಿ.ಕೆ. ಜಗದೀಶ ಕುಮಾರ್ | 04.06.1970 | 29.08.1996 | 01.03.2004 | |
| 14. | ವೈ. ಈರಣ್ಣ | 15.04.1953 | 29.09.1981 | 04.03.2004 | |
| 15. | ಜಿ. ಸೀತಾರಾಮಪ್ಪ | 01.06.1951 | 05.08.1975 | 06.03.2004 | |
| 16. | ಪ್ರಭಾಕರ್ ಹೆಚ್.ಜಿ. | 15.05.1979 | 05.07.2006 | 05.07.2006 | |
| 17. | ಪ್ರದೀಪ್ ಬಿ.ಎಸ್. | 12.03.1978 | 28.06.2006 | 28.06.2006 | |
| 18. | ರಾಜಪ್ಪ ಎನ್. | 04.06.1981 | 05.07.2006 | 05.07.2006 | |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಂ. ಭಾಟೆ**

ಪಿ.ಆರ್.1053

ಸರ್ಕಾರದ ಅಧೀನ ಕಾರ್ಯದರ್ಶಿ–3,
ಸಮಾಜ ಕಲ್ಯಾಣ ಇಲಾಖೆ.

## ಸಹಕಾರ ಇಲಾಖೆ

### ಸಹಕಾರ ಸಂಘಗಳ ನಿಬಂಧಕರು, ಕರ್ನಾಟಕ ರಾಜ್ಯ, ನಂ.1, ಅಲಿ ಆಸ್ಕರ್ ರಸ್ತೆ, ಬೆಂಗಳೂರು–52 ರವರ ನಡವಳಿಗಳು

**ವಿಷಯ:** ಶ್ರೀ ಎಂ.ಐ. ಕವಲೂರ, ವಾಹನಚಾಲಕರು (ಕಡ್ಡಾಯ ನಿವೃತ್ತಿ) ಸಹಕಾರ ಸಂಘಗಳ ಉಪನಿಬಂಧಕರ ಕಛೇರಿ, ಗದಗ ಜಿಲ್ಲೆ, ಗದಗ ಇವರನ್ನು ಸೇವೆಗೆ ಪುನರ್ ನೇಮಿಸುವ ಕುರಿತು.

**ಉಲ್ಲೇಖ:** 1) ಇದೇ ಸಮ ಸಂಖ್ಯೆಯ ದಿನಾಂಕ:04.11.2008ರ ಆದೇಶ.

2) ಸರ್ಕಾರದ ಆದೇಶ ಸಂಖ್ಯೆ: ಸಇ/82/ಎಸಸೇ/2009, ದಿನಾಂಕ:06.01.2010.

3) ಸಹಕಾರ ಸಂಘಗಳ ಉಪನಿಬಂಧಕರು, ಗದಗ ಜಿಲ್ಲೆ, ಗದಗ ಇವರ ಪತ್ರ ಸಂಖ್ಯೆ: ಡಿಆರ್/ ಜಿಡಿಜಿ/ ಸಿಬ್ಬಂದಿ/ಇಸಿಸಿ/ ಸಿಆರ್ 18/2010–11, ದಿನಾಂಕ:01.06.2010.

**ಪ್ರಸ್ತಾವನೆ:**

ಶ್ರೀ ಎಂ.ಐ. ಕವಲೂರ, ವಾಹನ ಚಾಲಕರು ಇವರ ಕೆಲವೊಂದು ಗಂಭೀರ ಸ್ವರೂಪದ ದುರ್ನಡತೆಯ ಆರೋಪಗಳಿಗಾಗಿ ಇವರ ವಿರುದ್ಧ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು 1957 ರನ್ವಯ ಸಹಕಾರ ಸಂಘಗಳ ಉಪನಿಬಂಧಕರು, ಗದಗ ಜಿಲ್ಲೆ, ಗದಗ ಇವರು ಮೂಲ ಶಿಸ್ತು ಪ್ರಾಧಿಕಾರವಾಗಿ ಕೈಗೊಂಡ

ಶಿಸ್ತು ಕ್ರಮದ ಇಲಾಖಾ ವಿಚಾರಣಾ ನಡವಳಿಗಳ ಮೇಲೆ ಸದರಿಯವರಿಗೆ ಉಲ್ಲೇಖ (1)ರ ಆದೇಶದ ಮೂಲಕ ಸರ್ಕಾರಿ ಸೇವೆಯಿಂದ "ಕಡ್ಡಾಯ ನಿವೃತ್ತಿ"ಗೊಳಿಸುವ ದಂಡನೆಯನ್ನು ವಿಧಿಸಲಾಗಿತ್ತು.

ಈ ಆದೇಶವನ್ನು ಪ್ರಶ್ನಿಸಿ ಶ್ರೀ ಎಂ.ಐ. ಕವಲೂರ ಇವರು ಮೇಲ್ಮನವಿ ಪ್ರಾಧಿಕಾರವಾದ ಸರ್ಕಾರದ ಮುಂದೆ ಸಲ್ಲಿಸಿದ ಮೇಲ್ಮನವಿ ಅರ್ಜಿಯನ್ನು ಮಾನವೀಯ ದೃಷ್ಟಿಯಿಂದ ಸರ್ಕಾರವು ಪರಿಗಣಿಸಿ ಉಲ್ಲೇಖ (1)ರ ಆದೇಶವನ್ನು ಉಲ್ಲೇಖ (2)ರ ಆದೇಶದ ಮೂಲಕ ರದ್ದುಪಡಿಸಿರುತ್ತದೆ ಮತ್ತು ಮೇಲ್ಮನವಿ ಅರ್ಜಿದಾರರ ವಿರುದ್ಧ ಇದ್ದ ಆರೋಪಗಳ ಹಿನ್ನೆಲೆಯಲ್ಲಿ ಹಾಗೂ ಇವರ ಆರೋಗ್ಯ ಸುಸ್ಥಿತಿಯಲ್ಲಿ ಇರದಂತೆ ಕಂಡುಬಂದ ಕಾರಣ ಇವರು ವಾಹನ ಚಾಲಕರಾಗಿ ಮುಂದುವರೆಯುವುದು ಸಮಂಜಸವಲ್ಲವೆಂದು ಮನಗಂಡು ಆರೋಗ್ಯದ ಬಗ್ಗೆ ವೈದ್ಯಕೀಯ ಮಂಡಳಿಯಿಂದ ದೃಢೀಕರಣ ಪತ್ರ ಪಡೆದ ನಂತರ ಇವರನ್ನು ಗ್ರೂಪ್ 'ಡಿ' ಹುದ್ದೆಗೆ ನೇಮಿಸಿ ಕಡ್ಡಾಯ ನಿವೃತ್ತಿ ದಿನಾಂಕದಿಂದ ಸೇವೆಗೆ ನೇಮಿಸುವವರೆಗೆ ಕಳೆದ ಅವಧಿಯನ್ನು ಹಕ್ಕಿನಲ್ಲಿರುವ/ ವೇತನ ರಹಿತ/ ಅಸಾಧಾರಣ ರಜೆ ಎಂಬುದಾಗಿ ಮಂಜೂರು ಮಾಡುವಂತೆ ನಿರ್ದೇಶಿಸಿರುತ್ತದೆ.

ಸರ್ಕಾರದ ದಿನಾಂಕ:06.01.2010ರ ಆದೇಶದಂತೆ ಶ್ರೀ ಎಂ.ಐ. ಕವಲೂರ, ವಾಹನಚಾಲಕರು ಇವರನ್ನು ಗ್ರೂಪ್ 'ಡಿ' ಹುದ್ದೆಗೆ ನೇಮಕ ಮಾಡುವ ಬಗ್ಗೆ ಪರಿಶೀಲಿಸಲು ಸಹಕಾರ ಸಂಘಗಳ ಉಪನಿಬಂಧಕರು, ಗದಗ ಜಿಲ್ಲೆ, ಗದಗ ಇವರು ಉಲ್ಲೇಖ (3)ರ ಪತ್ರದ ಮೂಲಕ ವೈದ್ಯಕೀಯ ಮಂಡಳಿಯ ಮೂಲ ವರದಿಯನ್ನು ಸಲ್ಲಿಸಿ ಈ ನೌಕರರು ಕಡ್ಡಾಯ ನಿವೃತ್ತಿ ನಂತರ ಪಡೆದುಕೊಂಡ ಹಣಕಾಸಿನ ಸೌಲಭ್ಯಗಳ ಮಾಹಿತಿಯನ್ನು ವರದಿ ಮಾಡಿದ್ದಾರೆ.

ಈ ಹಿನ್ನೆಲೆಯಲ್ಲಿ ಶ್ರೀ ಎಂ.ಐ. ಕವಲೂರ, ವಾಹನಚಾಲಕರು (ಕಡ್ಡಾಯ ನಿವೃತ್ತಿ) ಇವರು ಸರ್ಕಾರದಿಂದ ಪಡೆದುಕೊಂಡ ನಿವೃತ್ತಿ ನಂತರದ ಆರ್ಥಿಕ ಸೌಲಭ್ಯಗಳನ್ನು ಸರ್ಕಾರಕ್ಕೆ ಮರುಪಾವತಿಸುವ ಷರತ್ತಿಗೊಳಪಟ್ಟು ಇವರನ್ನು ಮೊದಲಿಗೆ ವಾಹನಚಾಲಕರ ಹುದ್ದೆಯ ಸೇವೆಗೆ ನೇಮಿಸಲು ತೀರ್ಮಾನಿಸಿದ್ದು ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಆದೇಶ**

**ಸಂಖ್ಯೆ: ಸಿಬ್ಬಂದಿ/4/ಇಸಿಸಿ/2008–09, ದಿನಾಂಕ:1ನೇ ಜುಲೈ, 2010**

ಶ್ರೀ ಎಂ.ಐ. ಕವಲೂರ, ವಾಹನಚಾಲಕರು (ಕಡ್ಡಾಯ ನಿವೃತ್ತಿ) ಇವರು ಉಲ್ಲೇಖ (1)ರ ಆದೇಶದ ಮೇರೆಗೆ ಸರ್ಕಾರಿ ಸೇವೆಯಿಂದ ಕಡ್ಡಾಯ ನಿವೃತ್ತಿ ನಂತರ ಪಡೆದುಕೊಂಡ ಎಲ್ಲಾ ಆರ್ಥಿಕ ಸೌಲಭ್ಯಗಳನ್ನು ಪೂರ್ತಿಯಾಗಿ ಸರ್ಕಾರಕ್ಕೆ ಮರು ಪಾವತಿಸುವ ಷರತ್ತಿಗೊಳಪಟ್ಟು ಉಲ್ಲೇಖ (2)ರ ಆದೇಶದಂತೆ ಇವರನ್ನು ಸಹಕಾರ ಸಂಘಗಳ ಉಪನಿಬಂಧಕರ ಕಛೇರಿ, ಗದಗ ಜಿಲ್ಲೆ, ಗದಗ ಈ ಕಛೇರಿಯಲ್ಲಿ ಖಾಲಿ ಇರುವ ವಾಹನ ಚಾಲಕರ ಹುದ್ದೆಗೆ ನೇಮಿಸಿ ಆದೇಶಿಸಿದೆ.

**ಡಾ: ಹೆಚ್.ವಿ ಪಾರ್ಶ್ವನಾಥ್**

ಪಿ.ಆರ್.1065

ಸಹಕಾರ ಸಂಘಗಳ ನಿಬಂಧಕರು,
ಕರ್ನಾಟಕ ರಾಜ್ಯ, ಬೆಂಗಳೂರು.

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ನಿಬಂಧಕರು, ಕರ್ನಾಟಕ ರಾಜ್ಯ, ನಂ.1, ಅಲಿ ಆಸ್ಕರ್ ರಸ್ತೆ, ಬೆಂಗಳೂರು–52 ರವರ ನಡವಳಿಗಳು**

**ವಿಷಯ:** ಶ್ರೀ ಎಂ.ಐ. ಕವಲೂರ, ವಾಹನಚಾಲಕರು (ಕಡ್ಡಾಯ ನಿವೃತ್ತಿ) ಸಹಕಾರ ಸಂಘಗಳ ಉಪನಿಬಂಧಕರ ಕಛೇರಿ, ಗದಗ ಜಿಲ್ಲೆ, ಗದಗ ಇವರನ್ನು ಗ್ರೂಪ್ 'ಡಿ' ವೃಂದದ ಹುದ್ದೆಗೆ ಸ್ಥಳನಿಯುಕ್ತಿಗೊಳಿಸುವ ಕುರಿತು.

**ಉಲ್ಲೇಖ:** 1) ಸರ್ಕಾರದ ಆದೇಶ ಸಂಖ್ಯೆ: ಸಇ/82/ಎಸಸೇ/2009, ದಿನಾಂಕ:06.01.2010.

2) ಸಹಕಾರ ಸಂಘಗಳ ಉಪನಿಬಂಧಕರು, ಗದಗ ಜಿಲ್ಲೆ, ಗದಗ ಇವರ ಪತ್ರ ಸಂಖ್ಯೆ: ಡಿಆರ್/ ಜಿಡಿಜಿ/ ಸಿಬ್ಬಂದಿ/ಇಸಿಸಿ/ ಸಿಆರ್ 18/2010–11, ದಿನಾಂಕ:01.06.2010.

3) ಇದೇ ಸಮ ಸಂಖ್ಯೆಯ ದಿನಾಂಕ:01.07.2010ರ ಆದೇಶ.

**ಪ್ರಸ್ತಾವನೆ:**

ಶ್ರೀ ಎಂ.ಐ. ಕವಲೂರ, ವಾಹನಚಾಲಕರು ಇವರನ್ನು ಸರ್ಕಾರಿ ಸೇವೆಯಿಂದ ಕಡ್ಡಾಯ ನಿವೃತ್ತಿಗೊಳಿಸಿದ ಇದೇ ಸಮ ಸಂಖ್ಯೆಯ ದಿನಾಂಕ:04.11.2008ರ ದಂಡನಾ ಆದೇಶವನ್ನು ಪ್ರಶ್ನಿಸಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು 1957ರ ನಿಯಮ 18ರಡಿ ಮೇಲ್ಮನವಿ ಪ್ರಾಧಿಕಾರವಾದ ಸರ್ಕಾರದ ಮುಂದೆ ಸಲ್ಲಿಸಿದ ಮೇಲ್ಮನವಿ ಅರ್ಜಿಯನ್ನು ಮಾನವೀಯ ದೃಷ್ಟಿಯಿಂದ ಸರ್ಕಾರವು ಪರಿಗಣಿಸಿ ದಿನಾಂಕ:04.11.2008ರ ದಂಡನಾ ಆದೇಶವನ್ನು ಉಲ್ಲೇಖ (1)ರ ಆದೇಶದ ಮೂಲಕ ರದ್ದುಪಡಿಸಿರುತ್ತದೆ ಮತ್ತು ಮೇಲ್ಮನವಿ ಅರ್ಜಿದಾರರ ವಿರುದ್ಧ ಇದ್ದ

ಆರೋಪಗಳ ಹಿನ್ನೆಲೆಯಲ್ಲಿ ಹಾಗೂ ಇವರ ಆರೋಗ್ಯ ಸುಸ್ಥಿತಿಯಲ್ಲಿ ಇರದಂತೆ ಕಂಡುಬಂದ ಕಾರಣ ಇವರು ವಾಹನಚಾಲಕರಾಗಿ ಮುಂದುವರೆಯುವುದು ಸಮಂಜಸವಲ್ಲವೆಂದು ಮನಗಂಡು ಆರೋಗ್ಯದ ಬಗ್ಗೆ ವೈದ್ಯಕೀಯ ಮಂಡಳಿಯಿಂದ ದೃಢೀಕರಣ ಪತ್ರ ಪಡೆದ ನಂತರ ಇವರನ್ನು ಗ್ರೂಪ್ 'ಡಿ' ಹುದ್ದೆಗೆ ನೇಮಿಸಿ ಕಡ್ಡಾಯ ನಿವೃತ್ತಿ ದಿನಾಂಕದಿಂದ ಸೇವೆಗೆ ನೇಮಿಸುವವರೆಗೆ ಕಳೆದ ಅವಧಿಯನ್ನು ಹಕ್ಕಿನಲ್ಲಿರುವ/ ವೇತನ ರಹಿತ/ ಅಸಾಧಾರಣ ರಜೆ ಎಂಬುದಾಗಿ ಮಂಜೂರು ಮಾಡುವಂತೆ ನಿರ್ದೇಶಿಸಿರುತ್ತದೆ.

ಸರ್ಕಾರದ ದಿನಾಂಕ:06.01.2010ರ ಆದೇಶದಂತೆ ಶ್ರೀ ಎಂ.ಐ. ಕವಲೂರ, ವಾಹನಚಾಲಕರು ಇವರು ಕಡ್ಡಾಯ ನಿವೃತ್ತಿ ನಂತರ ಸರ್ಕಾರದಿಂದ ಪಡೆದುಕೊಂಡ ನಿವೃತ್ತಿ ಸೌಲಭ್ಯಗಳನ್ನು ಪೂರ್ತಿಯಾಗಿ ಸರ್ಕಾರಕ್ಕೆ ಮರುಪಾವತಿಸುವ ಷರತ್ತಿಗೊಳಪಟ್ಟು ಮೊದಲಿಗೆ ಸಹಕಾರ ಸಂಘಗಳ ಉಪನಿಬಂಧಕರ ಕಛೇರಿ, ಗದಗ ಜಿಲ್ಲೆ, ಗದಗ ಇದರಲ್ಲಿ ಖಾಲಿ ಇದ್ದ ವಾಹನಚಾಲಕರ ಹುದ್ದೆಗೆ ಉಲ್ಲೇಖ (3)ರಂತೆ ನೇಮಿಸಲಾಗಿದೆ.

ಈ ನೌಕರರು ಸಕ್ಕರೆ ಖಾಯಿಲೆಯಿಂದ ಬಳಲುತ್ತಿರುವುದಾಗಿ ಮತ್ತು ವೈದ್ಯಕೀಯ ಉಪಚಾರ ಪಡೆಯುತ್ತಿರುವುದಾಗಿ, ಹೀಗಾಗಿ ಇವರು ಗ್ರೂಪ್ 'ಡಿ' ಹುದ್ದೆಯ ಕಾರ್ಯನಿರ್ವಹಿಸಲು ಅರ್ಹರಿರುವುದಾಗಿ ಜಿಲ್ಲಾ ಶಸ್ತ್ರ ಚಿಕಿತ್ಸಕರ ಕಾರ್ಯಾಲಯ, ಜಿಲ್ಲಾ ಆಸ್ಪತ್ರೆ, ಗದಗ ಇವರ ವೈದ್ಯಕೀಯ ಮಂಡಳಿ ವೈದ್ಯಾಧಿಕಾರಿಗಳು ತಮ್ಮ ತಪಾಸಣಾ ವರದಿಯಲ್ಲಿ ಅಭಿಪ್ರಾಯಪಟ್ಟಿರುತ್ತಾರೆ.

ಈ ಹಿನ್ನೆಲೆಯಲ್ಲಿ ಉಲ್ಲೇಖ (1) ಮತ್ತು (2)ರ ಮೇರೆಗೆ ಶ್ರೀ ಎಂ.ಐ. ಕವಲೂರ, ವಾಹನಚಾಲಕರು ಇವರನ್ನು ಗ್ರೂಪ್ 'ಡಿ' ಹುದ್ದೆಯಲ್ಲಿ ಕಾರ್ಯನಿರ್ವಹಿಸಲು ಸ್ಥಳನಿಯುಕ್ತಿಗೊಳಿಸುವುದಕ್ಕೆ ತೀರ್ಮಾನಿಸಿ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಆದೇಶ**

**ಸಂಖ್ಯೆ: ಸಿಬ್ಬಂದಿ/4/ಇಸಿಸಿ/2008–09, ದಿನಾಂಕ:5ನೇ ಜುಲೈ, 2010**

ಶ್ರೀ ಎಂ.ಐ. ಕವಲೂರ, ವಾಹನಚಾಲಕರು ಸಹಕಾರ ಸಂಘಗಳ ಉಪನಿಬಂಧಕರ ಕಛೇರಿ, ಗದಗ ಜಿಲ್ಲೆ, ಗದಗ ಇವರು ಉಲ್ಲೇಖ (3)ರ ಈ ಕಛೇರಿಯ ಆದೇಶದಂತೆ ವಿಧಿಸಿದ ಷರತ್ತನ್ನು ಪೂರೈಸಿ ವಾಹನಚಾಲಕರ ಹುದ್ದೆಗೆ ವರದಿ ಮಾಡಿಕೊಂಡ ಕೂಡಲೇ ಇವರನ್ನು ಉಲ್ಲೇಖ (1) ಮತ್ತು (2)ರ ಮೇರೆಗೆ ಗ್ರೂಪ್ 'ಡಿ' ಹುದ್ದೆಯ ವೇತನ ಶ್ರೇಣಿ ರೂ.4800–100–6000–125–6500–150–7100–175–7275ರಲ್ಲಿ ಕಾರ್ಯನಿರ್ವಹಿಸಲು ಸಹಕಾರ ಸಂಘಗಳ ಉಪನಿಬಂಧಕರ ಕಛೇರಿ, ಗದಗ ಜಿಲ್ಲೆ, ಗದಗ ಈ ಕಛೇರಿಯಲ್ಲಿ ಖಾಲಿ ಇರುವ ಗ್ರೂಪ್ 'ಡಿ' ಹುದ್ದೆಗೆ ಸ್ಥಳನಿಯುಕ್ತಿಗೊಳಿಸಿದೆ.

ಈ ನೌಕರರು ಕಡ್ಡಾಯ ನಿವೃತ್ತಿ ಪರಿಣಾಮವಾಗಿ ಕಳೆದ ಅವಧಿಯನ್ನು ಸಂದರ್ಭಾನುಸಾರ ಹಕ್ಕಿನಲ್ಲಿರುವ/ ವೇತನ ರಹಿತ/ ಅಸಾಧಾರಣ ರಜೆ ಎಂಬುದಾಗಿ ಪರಿಗಣಿಸಿ ಸಕ್ರಮಗೊಳಿಸುವಂತೆ ಆದೇಶಿಸಿದೆ.

**ಡಾ: ಹೆಚ್.ವಿ ಪಾರ್ಶ್ವನಾಥ್**

ಪಿ.ಆರ್.1066

ಸಹಕಾರ ಸಂಘಗಳ ನಿಬಂಧಕರು,
ಕರ್ನಾಟಕ ರಾಜ್ಯ, ಬೆಂಗಳೂರು.

**ಔಷಧ ನಿಯಂತ್ರಣ ಇಲಾಖೆ**

**ಕರ್ನಾಟಕ ರಾಜ್ಯದ ಔಷಧ ನಿಯಂತ್ರಕರ ಕಛೇರಿ, ಅರಮನೆ ರಸ್ತೆ, ಬೆಂಗಳೂರು–560 001**

**ಅಧಿಕೃತ ಜ್ಞಾಪನ**

**ಸಂಖ್ಯೆ: ಔನಿಇ/216/ಸಿಬ್ಬಂದಿ/2010–11, ದಿನಾಂಕ:19ನೇ ಜೂನ್, 2010**

**ವಿಷಯ:** ಇಲಾಖೆಯಲ್ಲಿ ಖಾಲಿ ಇರುವ ಸಹಾಯಕ ಔಷಧ ನಿಯಂತ್ರಕರ ಹುದ್ದೆಗಳ ಅಧಿಕ ಪ್ರಭಾರವನ್ನು ವಹಿಸಿಕೊಡುವ ಬಗ್ಗೆ.

**ಉಲ್ಲೇಖ:** 1) ಸರ್ಕಾರದ ಅಧಿಸೂಚನೆ–3, ಕ್ರಮ ಸಂಖ್ಯೆ:ಆಕುಕ 53 ಐಎಂಎಂ 2010, ದಿನಾಂಕ:01.06.2010.

2) ಈ ಕಛೇರಿ ಆದೇಶ ಸಂಖ್ಯೆ:ಔನಿಇ/147/ಸಿಬ್ಬಂದಿ/2010–11, ದಿನಾಂಕ:01.06.2010.

ಮೇಲ್ಕಾಣಿಸಿದ ವಿಷಯಕ್ಕೆ ಸಂಬಂಧಿಸಿದಂತೆ, ಉಲ್ಲೇಖ (1)ರ ಸರ್ಕಾರದ ಆದೇಶದನ್ವಯ ಉಲ್ಲೇಖ (2)ರ ಈ ಕಛೇರಿ ಆದೇಶದ ಮೇರೆಗೆ ವಹಿಸಲಾಗಿದ್ದ ಸಹಾಯಕ ಔಷಧ ನಿಯಂತ್ರಕರ ಖಾಲಿ ಹುದ್ದೆಗಳ ಅಧಿಕ ಪ್ರಭಾರವನ್ನು ಕರ್ನಾಟಕ ನಾಗರೀಕ ಸೇವಾ ನಿಯಮ 68ರನ್ವಯ ಈ ಕೆಳಕಂಡಂತೆ ತಿದ್ದುಪಡಿ ಮಾಡಿ ಆದೇಶ ಹೊರಡಿಸಲಾಗಿದೆ.

ಈ ಆದೇಶವು ತಕ್ಷಣದಿಂದ ಹಾಗೂ ಮುಂದಿನ ಆದೇಶದವರೆಗೂ ಜಾರಿಯಲ್ಲಿರುವುದು.

| ಕ್ರ. ಸಂ. | ಹುದ್ದೆಯ ಪದನಾಮ ಮತ್ತು ಸ್ಥಳ | ಹುದ್ದೆ ತೆರವಾದ ಕಾರಣ | ಹಾಲಿ ಅಧಿಕ ಪ್ರಭಾರದ ಮೇಲೆ ಕರ್ತವ್ಯವನ್ನು ನಿರ್ವಹಿಸುತ್ತಿರುವ ಅಧಿಕಾರಿಗಳ ಹೆಸರು ಹಾಗೂ ಪದನಾಮ | ನಿಯಮಾನುಸಾರ ಅಧಿಕ ಪ್ರಭಾರವನ್ನು ಸಮವರ್ತಿಯಾಗಿ ಹೊಂದಲು ಸೂಚಿಸಲ್ಪಟ್ಟಿರುವ ಅಧಿಕಾರಿಯ ಹೆಸರು, ಪದನಾಮ ಹಾಗೂ ಕಾರ್ಯನಿರ್ವಹಣಾ ಸ್ಥಳ |
|---|---|---|---|---|
| 1. | ಸಹಾಯಕ ಔಷಧ ನಿಯಂತ್ರಕರು, ಮಡಿಕೇರಿ ವೃತ್ತ, ಮಡಿಕೇರಿ. | ಶ್ರೀ ಟಿ.ಎ. ರಾಮಬಾಬು ರವರ ವರ್ಗಾವಣೆ ನಿಮಿತ್ತ | ಶ್ರೀ ಹಿರೋಳಿ ರೇವಣ ಸಿದ್ದಪ್ಪ, ಉಪ ಔಷಧ ನಿಯಂತ್ರಕರು, ಪ್ರಾದೇಶಿಕ ಕಛೇರಿ, ಮೈಸೂರು. | ಶ್ರೀ ಟಿ.ಎ. ರಾಮಬಾಬು ಸಹಾಯಕ ಔಷಧ ನಿಯಂತ್ರಕರು, ಮೈಸೂರು ವೃತ್ತ–2, ಮೈಸೂರು. |
| 2. | ಸಹಾಯಕ ಔಷಧ ನಿಯಂತ್ರಕರು, ಹಾವೇರಿ ವೃತ್ತ, ಹಾವೇರಿ. | ಶ್ರೀ ಟಿ.ಪಿ. ಸುಜಿತ್ ರವರ ವರ್ಗಾವಣೆ ನಿಮಿತ್ತ. | ಶ್ರೀ ನೀಲಕಂಠ ರಾಠೋಡ್, ಔಷಧ ಪರಿವೀಕ್ಷಕರು, ಧಾರವಾಡ ವೃತ್ತ, ಹುಬ್ಬಳ್ಳಿ | ಶ್ರೀ ಶಂಕರ್ ಜ್ಯೋತಿ, ಸಹಾಯಕ ಔಷಧ ನಿಯಂತ್ರಕರು, ಶಿವಮೊಗ್ಗ ವೃತ್ತ, ಶಿವಮೊಗ್ಗ. |
| 3. | ಸಹಾಯಕ ಔಷಧ ನಿಯಂತ್ರಕರು, ಗದಗ ವೃತ್ತ, ಗದಗ. | ಶ್ರೀ ಕೆ.ಎಸ್. ಮಲ್ಲಿಕಾರ್ಜುನರವರ ವರ್ಗಾವಣೆ ನಿಮಿತ್ತ | ಶ್ರೀ ಅಜಯ್‌ರಾಜ್ ಡಿ. ಷಹಾ ಔಷಧ ಪರಿವೀಕ್ಷಕರು, ಉಪ ಔಷಧ ನಿಯಂತ್ರಕರ ಪ್ರಾದೇಶಿಕ ಕಛೇರಿ, ಹುಬ್ಬಳ್ಳಿ. | ಶ್ರೀ ನಜೀರ್ ಅಹಮದ್, ಸಹಾಯಕ ಔಷಧ ನಿಯಂತ್ರಕರು, ಕೊಪ್ಪಳ ವೃತ್ತ, ಕೊಪ್ಪಳ. |

ಮೇಲ್ಕಂಡ ಎಲ್ಲಾ ಅಧಿಕಾರಿಗಳು ಸೂಚಿಸಲ್ಪಟ್ಟ ಹುದ್ದೆಗಳ ಪ್ರಭಾರ ವಹಿಸಿಕೊಂಡ ನಂತರ ಕೇಂದ್ರ ಕಛೇರಿ ಹಾಗೂ ಸಂಬಂಧಪಟ್ಟ ಎಲ್ಲಾ ಕಛೇರಿಗಳಿಗೂ ಪ್ರಭಾರ ವರ್ಗಾವಣೆಯ ಪ್ರಮಾಣ ಪತ್ರವನ್ನು ಕಳುಹಿಸಿಕೊಡಲು ಸೂಚಿಸಲಾಗಿದೆ.

ಔಷಧ ನಿಯಂತ್ರಕರು.
ಔಷಧ ನಿಯಂತ್ರಣ ಇಲಾಖೆ,
ಕರ್ನಾಟಕ ರಾಜ್ಯದ ಔಷಧ ನಿಯಂತ್ರಕರ ಕಛೇರಿ,
ಅರಮನೆ ರಸ್ತೆ, ಬೆಂಗಳೂರು–560 001.

ಪಿ.ಆರ್.1067

**ನಿರ್ದೇಶಕರು, ಗಣಿ ಮತ್ತು ಭೂ ವಿಜ್ಞಾನ ಇಲಾಖೆ, ಬೆಂಗಳೂರು ಇವರ ನಡವಳಿಗಳು**

**ಸಂಖ್ಯೆ: ಗಭೂಇ:ಗಗುಶಾ:521 ಎಎಂಎಲ್2006: 10–11/2215, ದಿನಾಂಕ:28ನೇ ಮೇ, 2010**

**ವಿಷಯ:** ಶ್ರೀ ವಿ.ಕಟ್ಟೆ ಬಸಪ್ಪ ಇವರು ಬಳ್ಳಾರಿ ಜಿಲ್ಲೆ ಸಂಡೂರು ತಾಲ್ಲೂಕು, ಜೋಗ ಗ್ರಾಮದ 96–04 ಹೆಕ್ಟೇರ್ ಪ್ರದೇಶದಲ್ಲಿಕಬ್ಬಿಣದ ಅದಿರು ಮ್ಯಾಂಗನೀಸ್, ರೆಡ್ ಆಕ್ಸೈಡ್ & ಓಕರ್ ಖನಿಜಕ್ಕಾಗಿ ಸಲ್ಲಿಸಿರುವ ಗಣಿಗುತ್ತಿಗೆ ಅರ್ಜಿ ಬಗ್ಗೆ.

**ಉಲ್ಲೇಖ:** 1. ಈ ಕಛೇರಿ ನೋಟೀಸ್ ಸಂಖ್ಯೆ: DMG: 521 AML 06:7989 ದಿನಾಂಕ:19–03–2010.
2. ಅರ್ಜಿದಾರರ ವಿವರಣೆ ದಿ:26–03–2010.

**ಪ್ರಸ್ತಾವನೆ:**

ಶ್ರೀ ವಿ.ಕಟ್ಟೆ ಬಸಪ್ಪ ಇವರು ಬಳ್ಳಾರಿ ಜಿಲ್ಲೆ, ಸಂಡೂರು ತಾಲ್ಲೂಕು, ಜೋಗ ಗ್ರಾಮದ 96–04 ಹೆಕ್ಟೇರ್ ಪ್ರದೇಶದಲ್ಲಿಕಬ್ಬಿಣದ ಅದಿರು, ಮ್ಯಾಂಗನೀಸ್, ರೆಡ್ ಆಕ್ಸೈಡ್ & ಓಕರ್ ಖನಿಜಕ್ಕಾಗಿ ಕೋರಿ ಸಲ್ಲಿಸಿರುವ ಗಣಿಗುತ್ತಿಗೆ ಅರ್ಜಿ ಸಂಖ್ಯೆ:521 ಎಎಂಎಲ್ 2006ನ್ನು ಪರಿಶೀಲಿಸಿದೆ.

ಅರ್ಜಿದಾರರು ಗಣಿಗುತ್ತಿಗೆಗಾಗಿ ಕೋರಿರುವ ಪ್ರದೇಶವು 98 AML 93, 217 AML 95, 954 AML 04, 297 AML 05, 50 APL 98, 274 AML 04, 393 AML 95, 267 AML 95, 129 APL 04 ಮತ್ತು ಇತರೆ ಅರ್ಜಿಗಳ ಪ್ರದೇಶಕ್ಕೆ ಅತಿ ವ್ಯಾಪ್ತಿಯಾಗುತ್ತದೆ. ಉಲ್ಲೇಖಿತ ಈ ಕಛೇರಿ ನೋಟೀಸ್‌ಗೆ ಅರ್ಜಿದಾರರು ದಿ:26–03–2010ರ ಪತ್ರದಲ್ಲಿ ಉತ್ತರಿಸುತ್ತಾ ತಮಗೆ

ಗಣಿಗಾರಿಕೆಯಲ್ಲಿ ಅನುಭವ ಹಾಗೂ ಆರ್ಥಿಕ ಸಂಪನ್ಮೂಲಗಳಿರುವುದರಿಂದ ತಮ್ಮ ಗಣಿಗುತ್ತಿಗೆ ಅರ್ಜಿಯನ್ನು ಪರಿಗಣಿಸುವಂತೆ ಕೋರಿರುತ್ತಾರೆ. ಪೂರ್ವ ಅರ್ಜಿಗಳ ಮೇಲೆ ಅತಿವ್ಯಾಪ್ತಿಯಾಗುತ್ತಿರುವುದರ ಬಗ್ಗೆ ಸಮಜಾಯಿಷಿ ನೀಡಿರುವುದಿಲ್ಲ. ಸ್ಥಳದ ಲಭ್ಯತೆ ಇಲ್ಲದೇ ಇರುವ ಹಿನ್ನೆಲೆಯಲ್ಲಿ ಕೆಳಕಂಡ ಆದೇಶ.

**ಆದೇಶ**

ಸರ್ಕಾರದ ಆದೇಶ ಸಂಖ್ಯೆ: ಸಿಐ 03 ಎಂಎಂಎಂ 95 ದಿನಾಂಕ:27–05–1995 ಮತ್ತು ಸಿಐ 214 ಎಂಎಂಎಂ 2006 ದಿನಾಂಕ:09–02–2007ರನ್ವಯ ನಿರ್ದೇಶಕರು, ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ ಇವರಿಗೆ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಗಣಿಗುತ್ತಿಗೆ ಅರ್ಜಿ ಸಂಖ್ಯೆ 521ಎಎಂಎಲ್ 2006ನ್ನು ಮೇಲೆ ವಿವರಿಸಿದ ಕಾರಣಗಳಿಗಾಗಿ ತಿರಸ್ಕರಿಸಲಾಗಿದೆ.

ನಿರ್ದೇಶಕರು
ಪಿ.ಆರ್.892 ಗಣಿ ಮತ್ತು ಭೂ ವಿಜ್ಞಾನ ಇಲಾಖೆ, ಬೆಂಗಳೂರು.

**ನಿರ್ದೇಶಕರು, ಗಣಿ ಮತ್ತು ಭೂ ವಿಜ್ಞಾನ ಇಲಾಖೆ, ಬೆಂಗಳೂರು ಇವರ ನಡವಳಿಗಳು**

**ಸಂಖ್ಯೆ: ಗಭೂಇ:ಗಗುಶಾ:1422 ಎಎಂಎಲ್2008: 10–11/2213 ದಿನಾಂಕ:28ನೇ ಮೇ, 2010**

**ವಿಷಯ:** ಮೆ:ಆಶಾ ಮೈನಿಂಗ್ ಕಂ. ಇವರು ಬಳ್ಳಾರಿ ಜಿಲ್ಲೆ, ಸಂಡೂರು ತಾಲ್ಲೂಕು, ರಮಣದುರ್ಗ ರಾಮಘಡ ರೇಂಜ್‌ನ 20–00 ಹೆಕ್ಟೇರ್ ಪ್ರದೇಶದಲ್ಲಿಕಬ್ಬಿಣದ ಅದಿರು ಖನಿಜಕ್ಕಾಗಿ ಸಲ್ಲಿಸಿರುವ ಗಣಿಗುತ್ತಿಗೆ ಅರ್ಜಿ ಬಗ್ಗೆ.

**ಉಲ್ಲೇಖ:**1. ಈ ಕಛೇರಿ ನೋಟೀಸ್ ಸಂಖ್ಯೆ: DMG: 1422 AML 08:15001-02 ದಿನಾಂಕ:11–02–2010.
2. ಅರ್ಜಿದಾರರ ವಿವರಣೆ ದಿ:18–03–2010.

**ಪ್ರಸ್ತಾವನೆ:**

ಮೆ:ಆಶಾ ಮೈನಿಂಗ್ ಕಂ. ಇವರು ಬಳ್ಳಾರಿ ಜಿಲ್ಲೆ, ಕೂಡ್ಲಿಗಿ ತಾಲ್ಲೂಕು ಸಂಡೂರು ತಾಲ್ಲೂಕು,ರಮಣದುರ್ಗ ರಾಮಘಡ ರೇಂಜ್‌ನ 20–00ಹೆಕ್ಟೇರ್ ಪ್ರದೇಶದಲ್ಲಿಕಬ್ಬಿಣದ ಅದಿರು ಖನಿಜಕ್ಕಾಗಿ ಕೋರಿ ಸಲ್ಲಿಸಿರುವ ಗಣಿಗುತ್ತಿಗೆ ಅರ್ಜಿ ಸಂಖ್ಯೆ:1422 ಎಎಂಎಲ್ 2008ನ್ನು ಪರಿಶೀಲಿಸಿದೆ. ಅಪೇಕ್ಷಿತ ಪ್ರದೇಶವು 1531 AML 04, 141 AML 08, 1305 AML 04, ಪ್ರದೇಶದ ಮೇಲೆ ಅತಿ ವ್ಯಾಪ್ತಿಯಾಗುತ್ತಿದೆ. ಉಲ್ಲೇಖಿತ ಈ ಕಛೇರಿ ನೋಟೀಸ್‌ಗೆ ಅರ್ಜಿದಾರರು ದಿನಾಂಕ:18–03–2010ರ ಪತ್ರದಲ್ಲಿ ಉತ್ತರ ನೀಡಿ, ಮೆ:ಕನ್ನಯ್ಯ ಲಾಲ್ ದೂದೇರಿಯಾರವರ ಗಣಿ ಗುತ್ತಿಗೆ ಪ್ರದೇಶದಿಂದ ನ್ಯಾಯಾಲಯದ ಆದೇಶದಂತೆ ಅರಣ್ಯ ಇಲಾಖೆಯು ಅಳತೆ ಮಾಡಿ ಕಡಿತಗೊಳಿಸಿದ ಪ್ರದೇಶವಾಗಿದೆಯೆಂದೂ, ಅರ್ಜಿದಾರರಾದ ತಮಗೆ ಆದೇಶ ಸಂ.ಸಿಐ 116 ಎಂಎಂಎಂ 2004 ದಿ:28–03–2008 ರಲ್ಲಿ ಮಂಜೂರಾದ ಪ್ರದೇಶಕ್ಕೆ ಹೊಂದಿಕೊಂಡಿರುವ ಕಾರಣ, ತಮ್ಮ ಅರ್ಜಿಯನ್ನು ಪರಿಗಣಿಸಬೇಕೆಂದು ಕೋರಿರುತ್ತಾರೆ. ಆದರೆ, ಅರ್ಜಿದಾರರು ತಿಳಿಸಿದಂತೆ ಗುತ್ತಿಗೆ ಪ್ರದೇಶದಿಂದ ಕಡಿತಗೊಳಿಸಿದ ಪ್ರದೇಶವಾಗಿದ್ದಲ್ಲಿ, ಎಂಸಿಆರ್ ನಿಯಮ 59ನ್ನು ಆಕರ್ಷಿಸುತ್ತದೆಯಾದ್ದರಿಂದ, ಪರಿಗಣಿಸಲು ಬರುವುದಿಲ್ಲ. ಅಂತೆಯೇ ಕೆಳಕಂಡ ಆದೇಶ.

**ಆದೇಶ**

ಸರ್ಕಾರದ ಆದೇಶ ಸಂಖ್ಯೆ: ಸಿಐ 03 ಎಂಎಂಎಂ 95 ದಿನಾಂಕ:27–05–1995 ಮತ್ತು ಸಿಐ 214 ಎಂಎಂಎಂ 2006 ದಿನಾಂಕ:09–02–2007ರನ್ವಯ ನಿರ್ದೇಶಕರು, ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ ಇವರಿಗೆ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಗಣಿಗುತ್ತಿಗೆ ಅರ್ಜಿ ಸಂಖ್ಯೆ 1422 ಎಎಂಎಲ್ 2008ನ್ನು ಮೇಲೆ ವಿವರಿಸಿದ ಕಾರಣಗಳಿಗಾಗಿ ತಿರಸ್ಕರಿಸಲಾಗಿದೆ.

ನಿರ್ದೇಶಕರು
ಪಿ.ಆರ್.893 ಗಣಿ ಮತ್ತು ಭೂ ವಿಜ್ಞಾನ ಇಲಾಖೆ, ಬೆಂಗಳೂರು.

**ನಿರ್ದೇಶಕರು, ಗಣಿ ಮತ್ತು ಭೂ ವಿಜ್ಞಾನ ಇಲಾಖೆ, ಬೆಂಗಳೂರು ಇವರ ನಡವಳಿಗಳು**

**ಸಂಖ್ಯೆ: ಗಭೂಇ:ಗಗುಶಾ:530 ಎಎಂಎಲ್2006: 10–11/2217, ದಿನಾಂಕ:28ನೇ ಮೇ, 2010**

**ವಿಷಯ:** ಶ್ರೀ ಪಿ.ವೆಂಕಟೇಶ್ ರವರು ಬಳ್ಳಾರಿ ಜಿಲ್ಲೆ, ಸಂಡೂರು ತಾಲ್ಲೂಕಿನ ದೇವಗಿರಿ ಗ್ರಾಮದ 90–00 ಎಕರೆ ಪ್ರದೇಶದಲ್ಲಿಕಬ್ಬಿಣದ ಅದಿರು & ಮ್ಯಾಂಗನೀಸ್ ಖನಿಜಕ್ಕಾಗಿ ಸಲ್ಲಿಸಿರುವ ಗಣಿಗುತ್ತಿಗೆ ಅರ್ಜಿ ಬಗ್ಗೆ.

**ಉಲ್ಲೇಖ:**1. ಈ ಕಛೇರಿ ನೋಟೀಸ್ ಸಂಖ್ಯೆ: DMG: 530 AML 06:5396-97 ದಿನಾಂಕ:19–03–2010.

2. ಅರ್ಜಿದಾರರ ವಿವರಣೆ ದಿ:29–03–2010.

**ಪ್ರಸ್ತಾವನೆ:**

ಶ್ರೀ ಪಿ.ವೆಂಕಟೇಶ್ ಇವರು ಬಳ್ಳಾರಿ ಜಿಲ್ಲೆ, ಕೂಡ್ಲಿಗಿ ತಾಲ್ಲೂಕು ಸಂಡೂರು ತಾಲ್ಲೂಕಿನ ದೇವಗಿರಿ ಗ್ರಾಮದ 90–00 ಎಕರೆ ಪ್ರದೇಶದಲ್ಲಿಕಬ್ಬಿಣದ ಅದಿರು & ಮ್ಯಾಂಗನೀಸ್ ಖನಿಜಕ್ಕಾಗಿ ಕೋರಿ ಸಲ್ಲಿಸಿರುವ ಗಣಿಗುತ್ತಿಗೆ ಅರ್ಜಿ ಸಂಖ್ಯೆ:530 ಎಎಂಎಲ್ 2006ನ್ನು ಪರಿಶೀಲಿಸಿದೆ. ಅರ್ಜಿದಾರರು ಗಣಿಗುತ್ತಿಗೆಗಾಗಿ ಕೋರಿರುವ ಪ್ರದೇಶವು 1232 AML 05, 358 AML 06, 197 AML 93, 256 AML 97 ಮತ್ತು 151 AML 96ರ ಪ್ರದೇಶ ಹಾಗೂ ಮೆ:ಸ್ಮಯೋರ್‌ರ ಗಣಿಗುತ್ತಿಗೆ ಪ್ರದೇಶಕ್ಕೆ ಅತಿವ್ಯಾಪ್ತಿಯಾಗುತ್ತಿದೆ. ಉಲ್ಲೇಖಿತ ಈ ಕಛೇರಿ ನೋಟೀಸ್‌ಗೆ ಅರ್ಜಿದಾರರು ದಿನಾಂಕ:29–03–2010ರ ಪತ್ರದಲ್ಲಿ ಉತ್ತರ ನೀಡಿ, ಅಪೇಕ್ಷಿತ ಪ್ರದೇಶವು ಕಂದಾಯ ವ್ಯಾಪ್ತಿಯ ಇನಾಂ ಭೂಮಿಗಳಾದ್ದರಿಂದ ಕಂದಾಯ ಇಲಾಖೆಗೆ ಅರ್ಜಿಯನ್ನು ಕಳುಹಿಸಿದಲ್ಲಿ, NOC ತರುವುದಾಗಿಯೂ, ಸ್ವಲ್ಪ ಪ್ರದೇಶವನ್ನಾದರೂ ಪರಿಗಣಿಸಬೇಕೆಂದು ಕೋರಿರುತ್ತಾರೆ. ಆದರೆ, ಸೂಚನಾ ಪತ್ರದಲ್ಲಿ ತಿಳಿಸಿರುವಂತೆ ಹಲವು ಪೂರ್ವ ಅರ್ಜಿಗಳ ಪ್ರದೇಶಕ್ಕೆ ಹಾಗೂ ಮೆ:ಸ್ಮಯೋರ್‌ರ ಗಣಿಗುತ್ತಿಗೆ ಪ್ರದೇಶಕ್ಕೆ ಅತಿವ್ಯಾಪ್ತಿಯಾಗುತ್ತಿರುವ ಕಾರಣ ಮತ್ತು ಅರ್ಜಿದಾರರು ನೀಡಿರುವ ವಿವರಣೆಯು ತೃಪ್ತಿಕರವಾಗಿಲ್ಲದಿರುವುದರಿಂದ ಕೆಳಕಂಡ ಆದೇಶ.

**ಆದೇಶ**

ಸರ್ಕಾರದ ಆದೇಶ ಸಂಖ್ಯೆ: ಸಿಐ 03 ಎಂಎಂಎಂ 95 ದಿನಾಂಕ:27–05–1995 ಮತ್ತು ಸಿಐ 214 ಎಂಎಂಎಂ 2006 ದಿನಾಂಕ:09–02–2007ರನ್ವಯ ನಿರ್ದೇಶಕರು, ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ ಇವರಿಗೆ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಗಣಿಗುತ್ತಿಗೆ ಅರ್ಜಿ ಸಂಖ್ಯೆ 530 ಎಎಂಎಲ್ 2008ನ್ನು ಮೇಲೆ ವಿವರಿಸಿದ ಕಾರಣಗಳಿಗಾಗಿ ತಿರಸ್ಕರಿಸಲಾಗಿದೆ.

ನಿರ್ದೇಶಕರು

ಪಿ.ಆರ್.894 ಗಣಿ ಮತ್ತು ಭೂ ವಿಜ್ಞಾನ ಇಲಾಖೆ, ಬೆಂಗಳೂರು.

**ನಿರ್ದೇಶಕರು, ಗಣಿ ಮತ್ತು ಭೂ ವಿಜ್ಞಾನ ಇಲಾಖೆ, ಬೆಂಗಳೂರು ಇವರ ನಡವಳಿಗಳು**

**ಸಂಖ್ಯೆ: ಗಭೂಇ:ಗಗುಶಾ:883 ಎಎಂಎಲ್2008: 10–11/2219, ದಿನಾಂಕ:28ನೇ ಮೇ, 2010**

**ವಿಷಯ:** M/s.Moin Sufi & Saif Enterprises ಇವರು ಬಳ್ಳಾರಿ ಜಿಲ್ಲೆ, ಕೂಡ್ಲಿಗಿ ತಾಲ್ಲೂಕು, ತುಲಾಹಳ್ಳಿ ಗ್ರಾಮದ 247–00 ಎಕರೆ ಪ್ರದೇಶದಲ್ಲಿಕಬ್ಬಿಣದ ಅದಿರು & ಮ್ಯಾಂಗನೀಸ್ ಖನಿಜಕ್ಕಾಗಿ ಸಲ್ಲಿಸಿರುವ ಗಣಿಗುತ್ತಿಗೆ ಅರ್ಜಿ ಬಗ್ಗೆ.

**ಉಲ್ಲೇಖ:** ಈ ಕಛೇರಿ ನೋಟೀಸ್ ಸಂಖ್ಯೆ: DMG: 883 AML 08:15143-44 ದಿನಾಂಕ:11–04–2010.

**ಪ್ರಸ್ತಾವನೆ:**

M/s.Moin Sufi & Saif Enterprises ಇವರು ಬಳ್ಳಾರಿ ಜಿಲ್ಲೆ, ಕೂಡ್ಲಿಗಿ ತಾಲ್ಲೂಕು, ತುಲಾಹಳ್ಳಿ ಗ್ರಾಮದ 247–00 ಎಕರೆ ಪ್ರದೇಶದಲ್ಲಿಕಬ್ಬಿಣದ ಅದಿರು ಖನಿಜಕ್ಕಾಗಿ ಕೋರಿ ಸಲ್ಲಿಸಿರುವ ಗಣಿಗುತ್ತಿಗೆ ಅರ್ಜಿ ಸಂಖ್ಯೆ:883 ಎಎಂಎಲ್ 2008ನ್ನು ಪರಿಶೀಲಿಸಿದೆ.

ಅರ್ಜಿದಾರರು ಗಣಿಗುತ್ತಿಗೆಗಾಗಿ ಕೋರಿರುವ ಪ್ರದೇಶವು ಶ್ರೀ ಆರ್.ಜಿ.ಜಂತಕಲ್ ಮತ್ತು ಶ್ರೀ ಎನ್.ಆರ್.ಕಾಮತ್ ಇವರ ಅನ್ವೇಷಣಾ ಗುತ್ತಿಗೆಯ ಪ್ರದೇಶದ ಮೇಲೆ ಅತಿ ವ್ಯಾಪ್ತಿಯಾಗುತ್ತಿದೆ. ಉಲ್ಲೇಖಿತ ಈ ಕಛೇರಿ ನೋಟೀಸ್‌ಗೆ ಅರ್ಜಿದಾರರು ದಿನಾಂಕ:20–03–2010ರ ಪತ್ರದಲ್ಲಿ ಉತ್ತರ ನೀಡಿ, ಅನ್ವೇಷಣಾ ಪರವಾನಿಗೆ ಮಂಜೂರಾತಿ ಪ್ರದೇಶದ ಮೇಲೆ ಅತಿ ವ್ಯಾಪ್ತಿಯಾಗುತ್ತಿದೆ ಎಂದು ತಿಳಿಸಿರುವ ಪ್ರದೇಶದಲ್ಲಿಖನಿಜಾನ್ವೇಷಣೆ ನಡೆಸಿರುವ ಕುರುಹು ಏನೂ ಇರುವುದಿಲ್ಲ. ಆದ್ದರಿಂದ ತಮ್ಮ ಅರ್ಜಿಯನ್ನು ಪರಿಗಣಿಸಬೇಕೆಂದು ಕೋರಿರುತ್ತಾರೆ. ಆದರೆ, ಖನಿಜಾನ್ವೇಷಣಾ ಪ್ರದೇಶವನ್ನು ಬೇರೆಯವರಿಗೆ ಮಂಜೂರು ಮಾಡಲು ಎಂಸಿಆರ್ ನಿಯಮ 59ರ ಪ್ರಕಾರ ಅಧಿಸೂಚನೆ ಮಾಡಿದ ನಂತರವಷ್ಟೇ ಸಾಧ್ಯವಾಗುತ್ತದೆ. ಪ್ರಸಕ್ತ ಅರ್ಜಿಯು Premature ಆಗುತ್ತದೆ. ಆದುದರಿಂದ, ನೀಡಿರುವ ವಿವರಣೆಯು ಅಸಮಂಜಸವೆಂದು ಪರಿಗಣಿಸಿ, ಕೆಳಕಂಡ ಆದೇಶ.

**ಆದೇಶ**

ಸರ್ಕಾರದ ಆದೇಶ ಸಂಖ್ಯೆ: ಸಿಐ 03 ಎಂಎಂಎಂ 95 ದಿನಾಂಕ:27–05–1995 ಮತ್ತು ಸಿಐ 214 ಎಂಎಂಎಂ 2006 ದಿನಾಂಕ:09–02–2007ರನ್ವಯ ನಿರ್ದೇಶಕರು, ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ ಇವರಿಗೆ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಗಣಿಗುತ್ತಿಗೆ ಅರ್ಜಿ ಸಂಖ್ಯೆ 883 ಎಎಂಎಲ್ 2008ನ್ನು ಮೇಲೆ ವಿವರಿಸಿದ ಕಾರಣಗಳಿಗಾಗಿ ತಿರಸ್ಕರಿಸಲಾಗಿದೆ.

ನಿರ್ದೇಶಕರು
ಪಿ.ಆರ್.895 ಗಣಿ ಮತ್ತು ಭೂ ವಿಜ್ಞಾನ ಇಲಾಖೆ, ಬೆಂಗಳೂರು.

**ನಿರ್ದೇಶಕರು, ಗಣಿ ಮತ್ತು ಭೂ ವಿಜ್ಞಾನ ಇಲಾಖೆ, ಬೆಂಗಳೂರು ಇವರ ನಡವಳಿಗಳು**

**ಸಂಖ್ಯೆ: ಗಭೂಇ:ಗಗುಶಾ:944 ಎಎಂಎಲ್2007: 10–11/2531, ದಿನಾಂಕ:4ನೇ ಜೂನ್, 2010**

**ವಿಷಯ:** ಶ್ರೀ ಎನ್.ಸತ್ಯನಾರಾಯಣ್ ರವರು ಬಳ್ಳಾರಿ ಜಿಲ್ಲೆ, ಸಂಡೂರು ತಾಲ್ಲೂಕಿನ ಸಿದ್ದಾಪುರ NEB range ನ 150–00 ಎಕರೆ ಪ್ರದೇಶದಲ್ಲಿಕಬ್ಬಿಣದ ಅದಿರು ಖನಿಜಕ್ಕಾಗಿ ಸಲ್ಲಿಸಿರುವ ಗಣಿಗುತ್ತಿಗೆ ಅರ್ಜಿ ಬಗ್ಗೆ.

**ಉಲ್ಲೇಖ:**1. ಈ ಕಛೇರಿ ನೋಟೀಸ್ ಸಂಖ್ಯೆ: DMG: 944 AML 07:5739–40 ದಿನಾಂಕ:25–03–2010.

2. ಅರ್ಜಿದಾರರ ವಿವರಣೆ ದಿ:08–04–2010.

**ಪ್ರಸ್ತಾವನೆ:**

ಶ್ರೀ ಎನ್.ಸತ್ಯನಾರಾಯಣ್ ಇವರು ಬಳ್ಳಾರಿ ಜಿಲ್ಲೆ, ಕೂಡ್ಲಿಗಿ ತಾಲ್ಲೂಕು ಸಂಡೂರು ತಾಲ್ಲೂಕಿನ ಸಿದ್ದಾಪುರ NEB range ನ 150–00 ಎಕರೆ ಪ್ರದೇಶದಲ್ಲಿಕಬ್ಬಿಣದ ಅದಿರು ಖನಿಜಕ್ಕಾಗಿ ಕೋರಿ ಸಲ್ಲಿಸಿರುವ ಗಣಿಗುತ್ತಿಗೆ ಅರ್ಜಿ ಸಂಖ್ಯೆ:944 ಎಎಂಎಲ್ 2007ನ್ನು ಪರಿಶೀಲಿಸಿದೆ. ಅರ್ಜಿದಾರರು ಗಣಿಗುತ್ತಿಗೆಗಾಗಿ ಕೋರಿರುವ ಪ್ರದೇಶವು 1217 AML 0, 1270 AML 03, 361 AML 06, 132 AML 94, 642 AML 06, 584 AML 06 ಮತ್ತು 27 AML 04ರ ಪ್ರದೇಶದ ಮೇಲೆ ಅತಿವ್ಯಾಪ್ತಿಯಾಗುತ್ತಿದೆ. ಉಲ್ಲೇಖಿತ ಈ ಕಛೇರಿ ನೋಟೀಸ್‌ಗೆ ಅರ್ಜಿದಾರರು ದಿನಾಂಕ:08–04–2010ರ ಪತ್ರದಲ್ಲಿ ಉತ್ತರ ನೀಡಿ, ಅರ್ಜಿಯನ್ನು ತಿರಸ್ಕರಿಸಲು ನಿರ್ದೇಶನಾಲಯಕ್ಕೆ ಅಧಿಕಾರವಿಲ್ಲ. ಆದ್ದರಿಂದ ಸರ್ಕಾರದ ಪರಿಶೀಲನೆಗೆ ಕೋರಿರುತ್ತಾರೆ ಮತ್ತು ವೈಯಕ್ತಿಕ ವಿಚಾರಣೆಗೆ ಅವಕಾಶ ಕೊಡಬೇಕೆಂದು ವಿನಂತಿಸಿರುತ್ತಾರೆ.

ಸೂಚನಾ ಪತ್ರದಲ್ಲಿ ತಿಳಿಸಿರುವಂತೆ ಹಲವು ಪೂರ್ವ ಅರ್ಜಿಗಳ ಪ್ರದೇಶಕ್ಕೆ ಅತಿವ್ಯಾಪ್ತಿಯಾಗುತ್ತಿರುವ ಕಾರಣ ಮತ್ತು ಈ ಕೆಳಗೆ ನಮೂದಿಸಿದ ಸರ್ಕಾರದ ಆದೇಶದಲ್ಲಿ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಅರ್ಜಿದಾರರು ನೀಡಿರುವ ವಿವರಣೆಯು ತೃಪ್ತಿಕರವಾಗಿಲ್ಲವೆಂದು ಪರಿಗಣಿಸಿ, ಕೆಳಕಂಡ ಆದೇಶ.

**ಆದೇಶ**

ಸರ್ಕಾರದ ಆದೇಶ ಸಂಖ್ಯೆ:ಸಿಐ 03 ಎಂಎಂಎಂ 95 ದಿನಾಂಕ:27–05–1995 ಮತ್ತು ಸಿಐ 214 ಎಂಎಂಎಂ 2006 ದಿನಾಂಕ:09–02–2007ರನ್ವಯ ನಿರ್ದೇಶಕರು, ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ ಇವರಿಗೆ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಗಣಿಗುತ್ತಿಗೆ ಅರ್ಜಿ ಸಂಖ್ಯೆ 944 ಎಎಂಎಲ್ 2007ನ್ನು ಮೇಲೆ ವಿವರಿಸಿದ ಕಾರಣಗಳಿಗಾಗಿ ತಿರಸ್ಕರಿಸಲಾಗಿದೆ.

ನಿರ್ದೇಶಕರು
ಪಿ.ಆರ್.920 ಗಣಿ ಮತ್ತು ಭೂ ವಿಜ್ಞಾನ ಇಲಾಖೆ, ಬೆಂಗಳೂರು.

**ನಿರ್ದೇಶಕರು, ಗಣಿ ಮತ್ತು ಭೂ ವಿಜ್ಞಾನ ಇಲಾಖೆ, ಬೆಂಗಳೂರು ಇವರ ನಡವಳಿಗಳು**

**ಸಂಖ್ಯೆ: ಗಭೂಇ:ಗಗುಶಾ:1343 ಎಎಂಎಲ್2005:10–11/2535, ದಿನಾಂಕ:4ನೇ ಜೂನ್, 2010**

**ವಿಷಯ:** ಶ್ರೀ ಹೆಚ್.ಎಂ.ಪಂಡಿತಾರಾಧ್ಯ ಇವರು ಬಳ್ಳಾರಿ ಜಿಲ್ಲೆ, ಸಂಡೂರು ತಾಲ್ಲೂಕು, N.E.B.Range ನ 180.00 ಎಕರೆ ಪ್ರದೇಶದಲ್ಲಿ ಮ್ಯಾಂಗನೀಸ್ & ಐರನ್ ಓರ್ ಖನಿಜಕ್ಕಾಗಿ ಸಲ್ಲಿಸಿರುವ ಗಣಿಗುತ್ತಿಗೆ ಅರ್ಜಿ ಬಗ್ಗೆ.

**ಉಲ್ಲೇಖ:**1. ಈ ಕಛೇರಿ ಪತ್ರ ಸಂಖ್ಯೆ: ಗಭೂಇ:ಗಗುಶಾ:1343 ಎಎಂಎಲ್ 05:5928–29: ದಿನಾಂಕ:31–03–2010.

2. ಅರ್ಜಿದಾರರ ವಿವರಣೆ ದಿ:25–04–2010.

**ಪ್ರಸ್ತಾವನೆ:**

ಶ್ರೀ ಹೆಚ್.ಎಂ.ಪಂಡಿತಾರಾಧ್ಯ ಇವರು ಬಳ್ಳಾರಿ ಜಿಲ್ಲೆ, ಸಂಡೂರು ತಾಲ್ಲೂಕು, N.E.B.Range ನ 180.00 ಎಕರೆ ಪ್ರದೇಶದಲ್ಲಿಮ್ಯಾಂಗನೀಸ್ & ಐರನ್ ಓರ್ ಖನಿಜಕ್ಕಾಗಿ ಕೋರಿ ಸಲ್ಲಿಸಿರುವ ಗಣಿಗುತ್ತಿಗೆ ಅರ್ಜಿ ಸಂಖ್ಯೆ: 1343 ಎಎಂಎಲ್ 2005 ಅನ್ನು ಪರಿಶೀಲಿಸಿದೆ.

ಅರ್ಜಿದಾರರು ಗಣಿಗುತ್ತಿಗೆಗಾಗಿ ಕೋರಿರುವ ಪ್ರದೇಶದ ಅರ್ಜಿಯೊಂದಿಗೆ ಲಗತ್ತಿಸಲಾದ ನಕ್ಷೆಯು ಕ್ರಮಬದ್ಧವಾಗಿರುವುದಿಲ್ಲ. ಹಾಗೂ ಸೂಚಿಸಿರುವ ಅಳತೆಗೆ ಪ್ರದೇಶವು ತಾಳೆಯಾಗುತ್ತಿಲ್ಲ. ಆದ್ದರಿಂದ ಕೋರಲಾದ ಪ್ರದೇಶವನ್ನು ಮೂಲ ಗ್ರಾಮ ನಕ್ಷೆಯಲ್ಲಿ 1":660' ಅಥವಾ 1":1320' ರ ಅಳತೆಯಲ್ಲಿ ಗುರ್ತಿಸಿ, ಸಲ್ಲಿಸಿದಲ್ಲಿ ಅರ್ಜಿಯನ್ನು ಪರಿಗಣಿಸ ಲಾಗುವುದು ತಪ್ಪಿದಲ್ಲಿ ತಮ್ಮ ಅರ್ಜಿಯನ್ನು ತಿರಸ್ಕರಿಸಲಾಗುವುದು ಎಂದು ಉಲ್ಲೇಖ (1)ರ ಈ ಕಛೇರಿ ಪತ್ರದಲ್ಲಿ ಕೇಳಲಾಗಿತ್ತು. ಅರ್ಜಿದಾರರು ಉಲ್ಲೇಖ (2)ರ ತಮ್ಮ ವಿವರಣೆಯಲ್ಲಿ ಪರಿಷ್ಕೃತ ನಕ್ಷೆಯನ್ನು ಸಲ್ಲಿಸುವುದಾಗಿ ತಿಳಿಸಿದ್ದರೂ ಸಹ ಲಗತ್ತಿಸದೇ ಇರುವ ಹಿನ್ನೆಲೆಯಲ್ಲಿ ಕೆಳಕಂಡ ಆದೇಶ

**ಆದೇಶ**

ಸರ್ಕಾರದ ಆದೇಶ ಸಂಖ್ಯೆ: ಸಿಐ 03 ಎಂಎಂಎಂ 95 ದಿನಾಂಕ:27–05–1995 ಮತ್ತು ಸಿಐ 214 ಎಂಎಂಎಂ 2006 ದಿನಾಂಕ:09–02–2007ರನ್ವಯ ನಿರ್ದೇಶಕರು ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ ಇವರಿಗೆ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಗಣಿಗುತ್ತಿಗೆ ಅರ್ಜಿ ಸಂಖ್ಯೆ 1343 ಎಎಂಎಲ್ 2005, ಅರ್ಜಿಯನ್ನು ಮೇಲೆ ವಿವರಿಸಿದ ಕಾರಣಗಳಿಗಾಗಿ ತಿರಸ್ಕರಿಸಲಾಗಿದೆ.

ನಿರ್ದೇಶಕರು

ಪಿ.ಆರ್.921 ಗಣಿ ಮತ್ತು ಭೂ ವಿಜ್ಞಾನ ಇಲಾಖೆ, ಬೆಂಗಳೂರು.

**ನಿರ್ದೇಶಕರು, ಗಣಿ ಮತ್ತು ಭೂ ವಿಜ್ಞಾನ ಇಲಾಖೆ, ಬೆಂಗಳೂರು ಇವರ ನಡವಳಿಗಳು**

**ಸಂಖ್ಯೆ: ಗಭೂಇ:ಗಗುಶಾ:1285 ಎಎಂಎಲ್2005:10–11/2537, ದಿನಾಂಕ:4ನೇ ಜೂನ್, 2010**

**ವಿಷಯ:** ಶ್ರೀ ಹೆಚ್.ಎಂ.ಪಂಡಿತಾರಾಧ್ಯ ಇವರು ಬಳ್ಳಾರಿ ಜಿಲ್ಲೆ ಮತ್ತು ತಾಲ್ಲೂಕು, ಕುಡುತಿನಿ ಗ್ರಾಮದ 90.00 ಎಕರೆ ಪ್ರದೇಶದಲ್ಲಿ ಮ್ಯಾಂಗನೀಸ್ & ಐರನ್ ಓರ್ ಖನಿಜಕ್ಕಾಗಿ ಸಲ್ಲಿಸಿರುವ ಗಣಿಗುತ್ತಿಗೆ ಅರ್ಜಿ ಬಗ್ಗೆ.

**ಉಲ್ಲೇಖ:**1. ಈ ಕಛೇರಿ ಪತ್ರ ಸಂಖ್ಯೆ: ಗಭೂಇ:ಗಗುಶಾ:1285 ಎಎಂಎಲ್ 05:5928–29: ದಿನಾಂಕ:31–03–2010.

2. ಅರ್ಜಿದಾರರ ವಿವರಣೆ ದಿ:25–04–2010.

**ಪ್ರಸ್ತಾವನೆ:**

ಶ್ರೀ ಹೆಚ್.ಎಂ.ಪಂಡಿತಾರಾಧ್ಯ ಇವರು ಬಳ್ಳಾರಿ ಜಿಲ್ಲೆ ಮತ್ತು ತಾಲ್ಲೂಕು, ಕುಡುತಿನಿ ಗ್ರಾಮದ 90.00 ಎಕರೆ ಪ್ರದೇಶದಲ್ಲಿಮ್ಯಾಂಗನೀಸ್ & ಐರನ್ ಓರ್ ಖನಿಜಕ್ಕಾಗಿ ಕೋರಿ ಸಲ್ಲಿಸಿರುವ ಗಣಿಗುತ್ತಿಗೆ ಅರ್ಜಿ ಸಂಖ್ಯೆ: 1285 ಎಎಂಎಲ್ 2005 ಅನ್ನು ಪರಿಶೀಲಿಸಿದೆ.

ಅರ್ಜಿದಾರರು ಗಣಿಗುತ್ತಿಗೆಗಾಗಿ ಕೋರಿರುವ ಪ್ರದೇಶವು ಪೂರ್ವ ಅರ್ಜಿ 197 AML 96, 93 APL 97 ಮತ್ತು 411 AML 04 ರ ಅರ್ಜಿ ಪ್ರದೇಶದ ಮೇಲೆ ಅತಿವ್ಯಾಪ್ತಿಯಾಗುತ್ತಿದ್ದು, ಈ ಬಗ್ಗೆ ಉಲ್ಲೇಖ (1)ರ ಈ ಕಛೇರಿ ಪತ್ರದಲ್ಲಿ ವಿವರಣೆಯನ್ನು 30 ದಿನಗಳೊಳಗೆ ಲಿಖಿತ ರೂಪದಲ್ಲಿ ಸಲ್ಲಿಸುವಂತೆ ತಿಳಿಸಲಾಗಿದ್ದು, ತಪ್ಪಿದಲ್ಲಿ ಅರ್ಜಿಯನ್ನು ತಿರಸ್ಕರಿಸಲಾಗುವುದು ಎಂದು ಸೂಚಿಸಲಾಗಿತ್ತು. ಅರ್ಜಿದಾರರು ಉಲ್ಲೇಖ (2)ರಲ್ಲಿ ವಿವರಣೆ ನೀಡುತ್ತಾ Project Proposal ಮಾಡುತ್ತಿರುವುದಾಗಿ ಮತ್ತು ಆರ್ಥಿಕ ಸಂಪನ್ಮೂಲಗಳನ್ನು ಹೊಂದಿರುವುದಾಗಿ ತಿಳಿಸಿದ್ದಾರೆ. ಸಮಜಾಯಿಷಿಯು ತೃಪ್ತಿಕರವಾಗಿಲ್ಲ ಮತ್ತು ಅತಿವ್ಯಾಪ್ತಿ ಬಗ್ಗೆ ವಿವರಣೆ ನೀಡಿಲ್ಲ. ಆದಕಾರಣ ಕೆಳಕಂಡ ಆದೇಶ.

**ಆದೇಶ**

ಸರ್ಕಾರದ ಆದೇಶ ಸಂಖ್ಯೆ: ಸಿಐ 03 ಎಂಎಂಎಂ 95 ದಿನಾಂಕ:27–05–1995 ಮತ್ತು ಸಿಐ 214 ಎಂಎಂಎಂ 2006 ದಿನಾಂಕ:09–02–2007ರನ್ವಯ ನಿರ್ದೇಶಕರು ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ ಇವರಿಗೆ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಗಣಿಗುತ್ತಿಗೆ ಅರ್ಜಿ ಸಂಖ್ಯೆ 1285 ಎಎಂಎಲ್ 2005, ಅರ್ಜಿಯನ್ನು ಮೇಲೆ ವಿವರಿಸಿದ ಕಾರಣಗಳಿಗಾಗಿ ತಿರಸ್ಕರಿಸಲಾಗಿದೆ.

ನಿರ್ದೇಶಕರು

ಪಿ.ಆರ್.931 ಗಣಿ ಮತ್ತು ಭೂ ವಿಜ್ಞಾನ ಇಲಾಖೆ, ಬೆಂಗಳೂರು.

**ನಿರ್ದೇಶಕರು, ಗಣಿ ಮತ್ತು ಭೂ ವಿಜ್ಞಾನ ಇಲಾಖೆ, ಬೆಂಗಳೂರು ಇವರ ನಡವಳಿಗಳು**

**ಸಂಖ್ಯೆ: ಗಭೂಇ:ಗಗುಶಾ:106 ಎಎಂಎಲ್ 05:10–11/2539, ದಿನಾಂಕ:4ನೇ ಜೂನ್, 2010**

**ವಿಷಯ:** ಶ್ರೀ ಎನ್.ಬಸಪ್ಪ ಇವರು ಬಳ್ಳಾರಿ ಜಿಲ್ಲೆ, ಸಂಡೂರು ತಾಲ್ಲೂಕು, ಮೇದರಹಳ್ಳಿ ಗ್ರಾಮದ 80.00 ಎಕರೆ ಪ್ರದೇಶದಲ್ಲಿ ಮ್ಯಾಂಗನೀಸ್ & ಐರನ್ ಓರ್ ಖನಿಜಕ್ಕಾಗಿ ಸಲ್ಲಿಸಿರುವ ಗಣಿಗುತ್ತಿಗೆ ಅರ್ಜಿ ಬಗ್ಗೆ.

**ಉಲ್ಲೇಖ:**1. ಈ ಕಛೇರಿ ಪತ್ರ ಸಂಖ್ಯೆ: ಗಭೂಇ : ಗಗುಶಾ:106 ಎಎಂಎಲ್ 05:6026–27: ದಿನಾಂಕ:31–03–2010.

2. ಅರ್ಜಿದಾರರ ವಿವರಣೆ ದಿ:29–04–2010.

**ಪ್ರಸ್ತಾವನೆ:**

ಶ್ರೀ ಎನ್.ಬಸಪ್ಪ ಇವರು ಬಳ್ಳಾರಿ ಜಿಲ್ಲೆ, ಸಂಡೂರು ತಾಲ್ಲೂಕು, ಮೇದರಹಳ್ಳಿ ಗ್ರಾಮದ 80.00 ಎಕರೆ ಪ್ರದೇಶದಲ್ಲಿಮ್ಯಾಂಗನೀಸ್ & ಐರನ್ ಓರ್ ಖನಿಜಕ್ಕಾಗಿ ಕೋರಿ ಸಲ್ಲಿಸಿರುವ ಗಣಿಗುತ್ತಿಗೆ ಅರ್ಜಿ ಸಂಖ್ಯೆ: 106 ಎಎಂಎಲ್ 2005 ಅನ್ನು ಪರಿಶೀಲಿಸಿದೆ.

ಅರ್ಜಿದಾರರು ಗಣಿಗುತ್ತಿಗೆಗಾಗಿ ಕೋರಿರುವ ಪ್ರದೇಶದ ಅರ್ಜಿಯೊಂದಿಗೆ ಲಗತ್ತಿಸಲಾದ ನಕ್ಷೆಯು ಕ್ರಮಬದ್ಧವಾಗಿರುವುದಿಲ್ಲ. ಹಾಗೂ ಸೂಚಿಸಿರುವ ಅಳತೆಗೆ ತಾಳೆಯಾಗುತ್ತಿಲ್ಲ. ಆದ್ದರಿಂದ ಕೋರಲಾದ ಪ್ರದೇಶವನ್ನು ಮೂಲ ಗ್ರಾಮ ನಕ್ಷೆಯಲ್ಲಿ 1":660' ಅಥವಾ 1":1320' ರ ಅಳತೆಯಲ್ಲಿ ಗುರ್ತಿಸಿ, ಸಲ್ಲಿಸಿದಲ್ಲಿ ಅರ್ಜಿಯನ್ನು ಪರಿಗಣಿಸ ಲಾಗುವುದು ತಪ್ಪಿದಲ್ಲಿ ಅರ್ಜಿಯನ್ನು ತಿರಸ್ಕರಿಸಲಾಗುವುದು ಎಂದು ಉಲ್ಲೇಖ (1)ರ ಈ ಕಛೇರಿ ಪತ್ರದಲ್ಲಿ ಕೇಳಲಾಗಿತ್ತು. ಅರ್ಜಿದಾರರು ಉಲ್ಲೇಖ (2)ರ ವಿವರಣೆಯಲ್ಲಿ ಪರಿಷ್ಕೃತ ನಕ್ಷೆಯನ್ನು 15 ದಿನಗಳೊಳಗಾಗಿ ಸಲ್ಲಿಸುವುದಾಗಿ ತಿಳಿಸಿದ್ದು, ಈ ವರೆವಿಗೂ ಸಲ್ಲಿಸದೇ ಇರುವ ಹಿನ್ನೆಲೆಯಲ್ಲಿ ಕೆಳಕಂಡ ಆದೇಶ

**ಆದೇಶ**

ಸರ್ಕಾರದ ಆದೇಶ ಸಂಖ್ಯೆ: ಸಿಐ 03 ಎಂಎಂಎಂ 95 ದಿನಾಂಕ:27–05–1995 ಮತ್ತು ಸಿಐ 214 ಎಂಎಂಎಂ 2006 ದಿನಾಂಕ:09–02–2007ರನ್ವಯ ನಿರ್ದೇಶಕರು ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ ಇವರಿಗೆ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಗಣಿಗುತ್ತಿಗೆ ಅರ್ಜಿ ಸಂಖ್ಯೆ 106 ಎಎಂಎಲ್ 2005, ಅರ್ಜಿಯನ್ನು ಮೇಲೆ ವಿವರಿಸಿದ ಕಾರಣಗಳಿಗಾಗಿ ತಿರಸ್ಕರಿಸಲಾಗಿದೆ.

ನಿರ್ದೇಶಕರು

ಪಿ.ಆರ್.922 ಗಣಿ ಮತ್ತು ಭೂ ವಿಜ್ಞಾನ ಇಲಾಖೆ, ಬೆಂಗಳೂರು.

**ನಿರ್ದೇಶಕರು, ಗಣಿ ಮತ್ತು ಭೂ ವಿಜ್ಞಾನ ಇಲಾಖೆ, ಬೆಂಗಳೂರು ಇವರ ನಡವಳಿಗಳು**

**ಸಂಖ್ಯೆ: ಗಭೂಇ:ಗಗುಶಾ:568 ಎಎಂಎಲ್2006: 10–11/2323, ದಿನಾಂಕ: 31ನೇ ಮೇ, 2010**

**ವಿಷಯ:** ಮೆ: ಆಶಾಪುರ ಮೈನ್ ಕೆಮ್ ಲಿ., ರವರು ದಿನಾಂಕ: 09.06.2006 ರಂದು ಬಳ್ಳಾರಿ ಜಿಲ್ಲೆ, ಸಂಡೂರು ತಾಲ್ಲೂಕು, ಮುರಾರಿಪುರ ಗ್ರಾಮದಲ್ಲಿ 790–00 ಎಕರೆ ಪ್ರದೇಶದಲ್ಲಿ ಕಬ್ಬಿಣದ ಅದಿರು & ಮ್ಯಾಂಗನೀಸ್ ಖನಿಜಕ್ಕಾಗಿ ಸಲ್ಲಿಸಿರುವ ಗಣಿಗುತ್ತಿಗೆ ಅರ್ಜಿ ಬಗ್ಗೆ.

**ಉಲ್ಲೇಖ:**1. ಈ ಕಛೇರಿ ನೋಟೀಸ್ ಸಂಖ್ಯೆ:DMG 568 AML 06/5378–79 ದಿ:19–03–2010.

2. ಅರ್ಜಿದಾರರ ವಿವರಣೆ ದಿ:26–03–2010.

**ಪ್ರಸ್ತಾವನೆ:**

ಮೆ: ಆಶಾಪುರ ಮೈನ್ ಕೆಮ್ ಲಿ., ಇವರು ಬಳ್ಳಾರಿ ಜಿಲ್ಲೆ ಸಂಡೂರು ತಾಲ್ಲೂಕು, ಮುರಾರಿಪುರ ಗ್ರಾಮದಲ್ಲಿ 790–00 ಎಕರೆ ಪ್ರದೇಶದಲ್ಲಿಕಬ್ಬಿಣದ ಅದಿರು ಖನಿಜಕ್ಕಾಗಿ ಕೋರಿ ಸಲ್ಲಿಸಿರುವ ಗಣಿ ಗುತ್ತಿಗೆ ಅರ್ಜಿ ಸಂಖ್ಯೆ: 568 ಎಎಂಎಲ್ 2006ನ್ನು ಪರಿಶೀಲಿಸಿದೆ.

ಅರ್ಜಿದಾರರು ಗಣಿಗುತ್ತಿಗೆಗಾಗಿ ಕೋರಿರುವ ಪ್ರದೇಶವು 173 AML 06, 314 AML 05, 1259 AML 03, 1327 AML 04ರ ಮೇಲೆ ಅತಿವ್ಯಾಪ್ತಿಯಾಗುತ್ತಿದ್ದು, ದಿನಾಂಕ:26–03–2010ರಂದು ಅರ್ಜಿದಾರರು ನೀಡಿರುವ ವಿವರಣೆಯಲ್ಲಿ ತಮ್ಮ ಕಂಪನಿಯು ಬಾಕ್ಸೈಟ್ ಮತ್ತು ಬೆಂಟೋನೈಟ್ ಖನಿಜಗಳ ಗಣಿಗಳನ್ನು ಹೊಂದಿದ್ದು, ಭಾರತದಲ್ಲೇ ಅತಿದೊಡ್ಡ ರಫ್ತುದಾರರಾಗಿರುವುದಾಗಿ, ಕರ್ನಾಟಕದಲ್ಲಿ ಕಡಿಮೆ ದರ್ಜೆಯ ಅದಿರಿನ ಪ್ರದೇಶಗಳಿಗೆ ಅರ್ಜಿ ಸಲ್ಲಿಸಿದ್ದು, ಚಿತ್ರದುರ್ಗದಲ್ಲಿ 0.5 MTPA ದ beneficiation plant ನ್ನು ಹಾಕಲುದ್ದೇಶಿಸಿರುವುದಾಗಿ ತಿಳಿಸಿ, ಸರ್ಕಾರವು sec 11(5)ರನ್ವಯ ಪೂರ್ವ

ಅರ್ಜಿಗಳಿದ್ದರೂ ನಂತರದ ಅರ್ಜಿಯನ್ನು ಪರಿಗಣಿಸಲು ಅಧಿಕಾರವಿರುವುದರಿಂದ, ತಮ್ಮ ಅರ್ಜಿಯನ್ನು ಪರಿಗಣಿಸುವಂತೆ ವಿನಂತಿಸಿ ಕೊಂಡಿರುತ್ತಾರೆ. ಪೂರ್ವ ಅರ್ಜಿಗಳಿದ್ದು, ಜೇಷ್ಠತೆ ಇಲ್ಲದಿರುವುದರಿಂದ ಮತ್ತು ಮುಕ್ತ ಪ್ರದೇಶದ ಲಭ್ಯತೆ ಇಲ್ಲದೆ ಇರುವ ಹಿನ್ನೆಲೆಯಲ್ಲಿ ಕೆಳಕಂಡ ಆದೇಶ

**ಆದೇಶ**

ಸರ್ಕಾರದ ಆದೇಶ ಸಂಖ್ಯೆ: ಸಿಐ 03 ಎಂಎಂಎಂ 95 ದಿನಾಂಕ:27–05–1995 ಮತ್ತು ಸಿಐ 214 ಎಂಎಂಎಂ 2006 ದಿನಾಂಕ:09–02–2007ರನ್ವಯ ನಿರ್ದೇಶಕರು, ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ ಇವರಿಗೆ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಗಣಿಗುತ್ತಿಗೆ ಅರ್ಜಿ ಸಂಖ್ಯೆ 568 ಎಎಂಎಲ್ 2006 ನ್ನು ಮೇಲೆ ವಿವರಿಸಿದ ಕಾರಣಗಳಿಗಾಗಿ ತಿರಸ್ಕರಿಸಲಾಗಿದೆ.

ನಿರ್ದೇಶಕರು

ಪಿ.ಆರ್.953 ಗಣಿ ಮತ್ತು ಭೂ ವಿಜ್ಞಾನ ಇಲಾಖೆ, ಬೆಂಗಳೂರು.

**ನಿರ್ದೇಶಕರು, ಗಣಿ ಮತ್ತು ಭೂ ವಿಜ್ಞಾನ ಇಲಾಖೆ, ಬೆಂಗಳೂರು ಇವರ ನಡವಳಿಗಳು**

**ಸಂಖ್ಯೆ: ಗಭೂಇ:ಗಗುಶಾ:417 ಎಎಂಎಲ್2005: 10–11/2481, ದಿನಾಂಕ:11ನೇ ಜೂನ್, 2010**

**ವಿಷಯ:** ಮೆ:ಚರಣ್ ಮಿನರಲ್ಸ್ ಕಂ. ರವರು ದಿ:04–04–2005ರಂದು ಬಳ್ಳಾರಿ ಜಿಲ್ಲೆ, ಸಂಡೂರು ತಾಲ್ಲೂಕು, ನಾಗಲಾಪುರ ಗ್ರಾಮದ 83.00 ಹೆಕ್ಟೇರ್ ಪ್ರದೇಶದಲ್ಲಿ ಕಬ್ಬಿಣದ ಅದಿರು ಮ್ಯಾಂಗನೀಸ್ ಮತ್ತು ಅಸೋಸಿಯೇಟೆಡ್ ಮಿನರಲ್ಸ್‌ಗಾಗಿಸಲ್ಲಿಸಿರುವ ಗಣಿಗುತ್ತಿಗೆ ಅರ್ಜಿ ಬಗ್ಗೆ.

**ಉಲ್ಲೇಖ:** 1. ಈ ಕಛೇರಿ ನೋಟೀಸ್ ಸಂಖ್ಯೆ:417 ಎಎಂಎಲ್ 2005:6058–59 ದಿನಾಂಕ:31–03–2010.
2. ಅರ್ಜಿದಾರರ ವಿವರಣೆ ದಿ:08–04–2010.

**ಪ್ರಸ್ತಾವನೆ:**

ಮೆ:ಚರಣ್ ಮಿನರಲ್ಸ್ ಕಂ. ರವರು ಬಳ್ಳಾರಿ ಜಿಲ್ಲೆ ಸಂಡೂರು ತಾಲ್ಲೂಕು, ನಾಗಲಾಪುರ ಗ್ರಾಮದ 83.00 ಹೆಕ್ಟೇರ್ ಪ್ರದೇಶದಲ್ಲಿಕಬ್ಬಿಣದ ಅದಿರು ಖನಿಜಕ್ಕಾಗಿ ಕೋರಿ ಸಲ್ಲಿಸಿರುವ ಗಣಿ ಗುತ್ತಿಗೆ ಅರ್ಜಿ ಸಂಖ್ಯೆ: 417 ಎಎಂಎಲ್ 2005 ನ್ನು ಪರಿಶೀಲಿಸಿದೆ.

ಅರ್ಜಿದಾರರು ಗಣಿಗುತ್ತಿಗೆಗಾಗಿ ಕೋರಿರುವ ಪ್ರದೇಶವು ಇತರೆ ಪೂರ್ವ ಅರ್ಜಿಗಳಾದ 36 AML 04, 1464 ಂಐ 04, 198 ಂಐ 05ಗಳ ಪ್ರದೇಶದ ಮೇಲೆ ಪೂರ್ಣ ಪ್ರಮಾಣದಲ್ಲಿ ಅತಿವ್ಯಾಪ್ತಿಯಾಗುತ್ತಿದ್ದು, ಈ ಬಗ್ಗೆ ಉಲ್ಲೇಖ (1)ರ ಈ ಕಛೇರಿ ನೋಟೀಸ್‌ಗೆ ಅರ್ಜಿದಾರರು ಉಲ್ಲೇಖ (2)ರಲ್ಲಿ ನೀಡಿರುವ ವಿವರಣೆಯನ್ನು ಪರಿಶೀಲಿಸಿದೆ. ತಾವು Integrated steel plant ನ್ನು ರೂ.997 ಕೋಟಿ ವೆಚ್ಚದಲ್ಲಿ ಪ್ರಾರಂಭಿಸಲು ಉದ್ದೇಶಿಸಿರುವುದಾಗಿ ತಿಳಿಸುತ್ತಾ, ಅರ್ಜಿಯನ್ನು ಪರಿಗಣಿಸಲು ವಿನಂತಿಸಿಕೊಂಡಿದ್ದರೂ ಸಹ, ಅಪೇಕ್ಷಿತ ಪ್ರದೇಶವು ಪೂರ್ಣ ಪ್ರಮಾಣದಲ್ಲಿ ಅತಿವ್ಯಾಪ್ತಿಯಾಗುತ್ತಿರುವುದರಿಂದ ಮುಕ್ತ ಪ್ರದೇಶದ ಲಭ್ಯತೆ ಇಲ್ಲದೇ ಇರುವ ಹಿನ್ನೆಲೆಯಲ್ಲಿ ಕೆಳಕಂಡ ಆದೇಶ.

**ಆದೇಶ**

ಸರ್ಕಾರದ ಆದೇಶ ಸಂಖ್ಯೆ: ಸಿಐ 03 ಎಂಎಂಎಂ 95 ದಿನಾಂಕ:27–05–1995 ಮತ್ತು ಸಿಐ 214 ಎಂಎಂಎಂ 2006 ದಿನಾಂಕ:09–02–2007ರನ್ವಯ ನಿರ್ದೇಶಕರು, ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ ಇವರಿಗೆ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಗಣಿಗುತ್ತಿಗೆ ಅರ್ಜಿ ಸಂಖ್ಯೆ 417 ಎಎಂಎಲ್ 2005 ನ್ನು ಮೇಲೆ ವಿವರಿಸಿದ ಕಾರಣಗಳಿಗಾಗಿ ತಿರಸ್ಕರಿಸಲಾಗಿದೆ.

ನಿರ್ದೇಶಕರು

ಗಣಿ ಮತ್ತು ಭೂ ವಿಜ್ಞಾನ ಇಲಾಖೆ, ಬೆಂಗಳೂರು.

**ನಿರ್ದೇಶಕರು, ಗಣಿ ಮತ್ತು ಭೂ ವಿಜ್ಞಾನ ಇಲಾಖೆ, ಬೆಂಗಳೂರು ಇವರ ನಡವಳಿಗಳು**

**ಸಂಖ್ಯೆ: ಗಭೂಇ:ಗಗುಶಾ:2438 ಎಎಂಎಲ್2007: 10–11/2483, ದಿನಾಂಕ:11ನೇ ಜೂನ್, 2010**

**ವಿಷಯ:** M/s. Rao & Pateel Minerals Associates ರವರು ದಿ:19–10–2007 ರಂದು ಬಳ್ಳಾರಿ ಜಿಲ್ಲೆ, ಸಂಡೂರು ತಾಲ್ಲೂಕು, ಜೋಗ ಗ್ರಾಮದ 99.19 ಹೆಕ್ಟೇರ್ ಪ್ರದೇಶದಲ್ಲಿ ಕಬ್ಬಿಣದ ಅದಿರು ಖನಿಜಕ್ಕಾಗಿ ಸಲ್ಲಿಸಿರುವ ಗಣಿಗುತ್ತಿಗೆ ಅರ್ಜಿ ಬಗ್ಗೆ.

**ಉಲ್ಲೇಖ:**1. ಈ ಕಛೇರಿ ನೋಟೀಸ್ ಸಂಖ್ಯೆ:2438 ಎಎಂಎಲ್ 2007:8449 ದಿನಾಂಕ:31–05–2010.
2. ಅರ್ಜಿದಾರರ ವಿವರಣೆ ದಿ:16–04–2010.

**ಪ್ರಸ್ತಾವನೆ:**

M/s. Rao & Pateel Minerals Associates ರವರು ಬಳ್ಳಾರಿ ಜಿಲ್ಲೆ ಸಂಡೂರು ತಾಲ್ಲೂಕು, ಜೋಗ ಗ್ರಾಮದ 99.19 ಹೆಕ್ಟೇರ್ ಪ್ರದೇಶದಲ್ಲಿಕಬ್ಬಿಣದ ಅದಿರು ಖನಿಜಕ್ಕಾಗಿ ಕೋರಿ ಸಲ್ಲಿಸಿರುವ ಗಣಿ ಗುತ್ತಿಗೆ ಅರ್ಜಿ ಸಂಖ್ಯೆ: 2438 ಎಎಂಎಲ್ 2007ನ್ನು ಪರಿಶೀಲಿಸಿದೆ.

ಅರ್ಜಿದಾರರು ಗಣಿಗುತ್ತಿಗೆಗಾಗಿ ಕೋರಿರುವ ಪ್ರದೇಶವು ಪೂರ್ವ ಅರ್ಜಿ 581 ಒಎಐ 07, 67ಒಎಐ 07ರ ಪ್ರದೇಶದ ಮೇಲೆ ಅತಿವ್ಯಾಪ್ತಿಯಾಗುತ್ತಿದ್ದು, ಈ ಬಗ್ಗೆ ಉಲ್ಲೇಖ (1)ರ ಈ ಕಛೇರಿ ನೋಟೀಸ್‌ಗೆ ಅರ್ಜಿದಾರರು ಉಲ್ಲೇಖ (2)ರಲ್ಲಿ ನೀಡಿರುವ ವಿವರಣೆಯಲ್ಲಿ Integrated Steel Plant ನ್ನು ಹಾಕಲು ಉದ್ದೇಶಿಸಿರುವುದಾಗಿ ತಿಳಿಸುತ್ತಾ ಎಲ್ಲಾ ಅರ್ಜಿದಾರರಿಗೂ ಸಮಾನ ಅವಕಾಶ ಒದಗಿಸಲು ಕೋರಿರುತ್ತಾರೆ. ಮತ್ತೊಮ್ಮೆ ಪರಿಶೀಲಿಸಲಾಗಿ ಅಪೇಕ್ಷಿತ ಪ್ರದೇಶವು ಪೂರ್ಣ ಪ್ರಮಾಣದಲ್ಲಿ ಅತಿವ್ಯಾಪ್ತಿಯಾಗುತ್ತಿರುವುದರಿಂದ ಸ್ಥಳದ ಲಭ್ಯತೆ ಇರುವುದಿಲ್ಲ. ವರ್ಜಿನ್ ಪ್ರದೇಶಗಳಿಗೆ ಬಂದ ಅರ್ಜಿಗಳನ್ನು Sec.11(2)ರ ಪ್ರಕಾರ ವಿಲೇ ಮಾಡುತ್ತಿರುವುದರಿಂದ ಕೆಳಕಂಡ ಆದೇಶ.

**ಆದೇಶ**

ಸರ್ಕಾರದ ಆದೇಶ ಸಂಖ್ಯೆ: ಸಿಐ 03 ಎಂಎಂಎಂ 95 ದಿನಾಂಕ:27–05–1995 ಮತ್ತು ಸಿಐ 214 ಎಂಎಂಎಂ 2006 ದಿನಾಂಕ:09–02–2007ರನ್ವಯ ನಿರ್ದೇಶಕರು, ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ ಇವರಿಗೆ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಗಣಿಗುತ್ತಿಗೆ ಅರ್ಜಿ ಸಂಖ್ಯೆ 2438 ಎಎಂಎಲ್ 2007 ನ್ನು ಮೇಲೆ ವಿವರಿಸಿದ ಕಾರಣಗಳಿಗಾಗಿ ತಿರಸ್ಕರಿಸಲಾಗಿದೆ.

ನಿರ್ದೇಶಕರು
ಗಣಿ ಮತ್ತು ಭೂ ವಿಜ್ಞಾನ ಇಲಾಖೆ, ಬೆಂಗಳೂರು.

**ನಿರ್ದೇಶಕರು, ಗಣಿ ಮತ್ತು ಭೂ ವಿಜ್ಞಾನ ಇಲಾಖೆ, ಬೆಂಗಳೂರು ಇವರ ನಡವಳಿಗಳು**

**ಸಂಖ್ಯೆ: ಗಭೂಇ:ಗಗುಶಾ:1119 ಎಎಂಎಲ್2008:10–11/2479, ದಿನಾಂಕ:11ನೇ ಜೂನ್, 2010**

**ವಿಷಯ:** ಶ್ರೀ ಕೆ. ರಾಜಶೇಖರ ನಾಯ್ಕ ರವರು ಬಳ್ಳಾರಿ ಜಿಲ್ಲೆ, ಸಂಡೂರು ತಾಲ್ಲೂಕು, ನಾರಾಯಣಪುರ ಗ್ರಾಮದಲ್ಲಿ 20.00 ಎಕರೆ ಪ್ರದೇಶದಲ್ಲಿಐರನ್ ಓರ್ ಖನಿಜಕ್ಕಾಗಿ ಸಲ್ಲಿಸಿರುವ ಗಣಿಗುತ್ತಿಗೆ ಅರ್ಜಿ ಬಗ್ಗೆ.

**ಉಲ್ಲೇಖ:** 1. ಈ ಕಛೇರಿ ನೋಟೀಸ್ ಸಂಖ್ಯೆ: DMG:1119 AML 08:4517: ದಿನಾಂಕ:18–02–2010.

2. ಅರ್ಜಿದಾರರ ವಿವರಣೆ ದಿ:08–03–2010.

**ಪ್ರಸ್ತಾವನೆ:**

ಶ್ರೀ ಕೆ. ರಾಜಶೇಖರ ನಾಯ್ಕ ರವರು ಬಳ್ಳಾರಿ ಜಿಲ್ಲೆ, ಸಂಡೂರು ತಾಲ್ಲೂಕು, ರಾಮಘಡ ಗ್ರಾಮದಲ್ಲಿ 20.00 ಎಕರೆ ಪ್ರದೇಶದಲ್ಲಿಐರನ್ ಓರ್ ಖನಿಜಕ್ಕಾಗಿ ಕೋರಿ ಸಲ್ಲಿಸಿರುವ ಗಣಿಗುತ್ತಿಗೆ ಅರ್ಜಿ ಸಂಖ್ಯೆ:1119 ಎಎಂಎಲ್ 2008ನ್ನು ಪರಿಶೀಲಿಸಿದೆ.

ಅರ್ಜಿದಾರರು ಗಣಿಗುತ್ತಿಗೆಗಾಗಿ ಕೋರಿರುವ ಪ್ರದೇಶವು ಪೂರ್ವ ಅರ್ಜಿ old ML area 1672, ML No.2563 of Kannaiahlal Dudheria, PL area of K.Thippanna, 1531 AML 04, 144 AML 08, 141 AML 08, 1067AML 06 ಮತ್ತು ಇತರೆ ಅರ್ಜಿಗಳ ಅನ್ವೇಷಣಾ ಲೈಸೆನ್ಸ್ ಪ್ರದೇಶಕ್ಕೆ ಪೂರ್ಣವಾಗಿ ಅತಿವ್ಯಾಪ್ತಿಯಾಗುತ್ತಿದ್ದು ಸದರಿ ಅರ್ಜಿಯನ್ನು ಪರಿಗಣಿಸಲು ಸ್ಥಳಾವಕಾಶ ಇಲ್ಲದೇ ಇರುವ ಹಿನ್ನೆಲೆಯಲ್ಲಿ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

ಸರ್ಕಾರದ ಆದೇಶ ಸಂಖ್ಯೆ: ಸಿಐ 03 ಎಂಎಂಎಂ 95 ದಿನಾಂಕ:27–05–1995 ಮತ್ತು ಸಿಐ 214 ಎಂಎಂಎಂ 2006 ದಿನಾಂಕ:09–02–2007ರನ್ವಯ ನಿರ್ದೇಶಕರು, ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ ಇವರಿಗೆ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಗಣಿಗುತ್ತಿಗೆ ಅರ್ಜಿ ಸಂಖ್ಯೆ 1119 ಎಎಂಎಲ್ 2008, ಅರ್ಜಿಯನ್ನು ಮೇಲೆ ವಿವರಿಸಿದ ಕಾರಣಗಳಿಗಾಗಿ ತಿರಸ್ಕರಿಸಲಾಗಿದೆ.

ನಿರ್ದೇಶಕರು
ಗಣಿ ಮತ್ತು ಭೂ ವಿಜ್ಞಾನ ಇಲಾಖೆ, ಬೆಂಗಳೂರು.

**ನಿರ್ದೇಶಕರು, ಗಣಿ ಮತ್ತು ಭೂ ವಿಜ್ಞಾನ ಇಲಾಖೆ, ಬೆಂಗಳೂರು ಇವರ ನಡವಳಿಗಳು**

**ಸಂಖ್ಯೆ: ಗಭೂಇ:ಗಗುಶಾ:09 ಎಪಿಎಲ್ 2007:10-11/2558, ದಿನಾಂಕ:15ನೇ ಜೂನ್, 2010**

**ವಿಷಯ:** ಮೆ: ವಾಗೀಶ್ ಪಾಠಕ್ ಪ್ರೋಪರ್ಟೀಸ್ ಪ್ರೈ.ಲಿ., ಇವರು ದಿನಾಂಕ:03.01.2007ರಂದು ಬಳ್ಳಾರಿ ಜಿಲ್ಲೆ, ಬಳ್ಳಾರಿ & ಸಂಡೂರು ತಾಲ್ಲೂಕು, ಕುಳ್ಳಿಗುಡ್ಡ, ಬೋಳುಗುಡ್ಡ, ಕಾಲಿಗುಡ್ಡ & ದಿಲಾರ್‌ಗುಡ್ಡ ಗ್ರಾಮಗಳ 430 ಹೆಕ್ಟೇರ್ ಪ್ರದೇಶದಲ್ಲಿ ಕಬ್ಬಿಣದ ಅದಿರು ಮತ್ತು ಇತರೆ ಖನಿಜಗಳಿಗಾಗಿ ಸಲ್ಲಿಸಿರುವ ಖನಿಜಾನ್ವೇಷಣಾ ಲೈಸೆನ್ಸ್ ಅರ್ಜಿ ಬಗ್ಗೆ.

**ಉಲ್ಲೇಖ:** 1. ಈ ಕಛೇರಿ ಪತ್ರ ಸಂಖ್ಯೆ:ಗಭೂಇ:ಗಗುಶಾ:09: APL 07/07-08, ದಿನಾಂಕ:02-11-2007.

2. ಈ ಕಛೇರಿ ನೋಟೀಸ್ ಸಂಖ್ಯೆ:ಗಭೂಇ:ಗಗುಶಾ:09: APL 07/10-11, 940-41, ದಿನಾಂಕ:20-04-2010.

3. ಅರ್ಜಿದಾರರ ವಿವರಣೆ ದಿ:05-04-2010.

**ಪ್ರಸ್ತಾವನೆ:**

ಮೆ: ವಾಗೀಶ್ ಪಾಠಕ್ ಪ್ರೋಪರ್ಟೀಸ್ ಪ್ರೈ.ಲಿ., ಇವರು ಬಳ್ಳಾರಿ ಜಿಲ್ಲೆ, ಬಳ್ಳಾರಿ & ಸಂಡೂರು ತಾಲ್ಲೂಕು, ಕುಳ್ಳಿಗುಡ್ಡ, ಬೋಳುಗುಡ್ಡ, ಕಾಲಿಗುಡ್ಡ & ದಿಲಾರ್‌ಗುಡ್ಡ ಗ್ರಾಮಗಳ 430 ಹೆಕ್ಟೇರ್ ಪ್ರದೇಶದಲ್ಲಿ ಕಬ್ಬಿಣದ ಅದಿರು ಮತ್ತು ಇತರೆ ಖನಿಜಗಳಿಗಾಗಿ ಅನ್ವೇಷಣಾ ಲೈಸೆನ್ಸ್ ಕೋರಿ ಸಲ್ಲಿಸಿರುವ ಅರ್ಜಿ ಸಂಖ್ಯೆ:09 ಎಪಿಎಲ್ 2007ನ್ನು ಪರಿಶೀಲಿಸಿದೆ.

ಖನಿಜಾನ್ವೇಷಣಾ ಲೈಸೆನ್ಸ್‌ಗಾಗಿ ಕೋರಿರುವ ಪ್ರದೇಶದ ಸರಿಯಾದ ನಕಾಶೆಯನ್ನು ಸಲ್ಲಿಸುವಂತೆ ಉಲ್ಲೇಖ (1)ರಲ್ಲಿ ಅರ್ಜಿದಾರರಿಗೆ ಪತ್ರ ಬರೆಯಲಾಗಿತ್ತು. ಪುನಃ ಉಲ್ಲೇಖ (2)ರ ಈ ಕಛೇರಿ ನೋಟೀಸ್‌ನಲ್ಲಿ ಈ ಬಗ್ಗೆ ತಿಳಿಸಲಾಗಿದ್ದು, ಅದಕ್ಕೆ ಅರ್ಜಿದಾರರು ಉಲ್ಲೇಖ (3)ರ ತಮ್ಮ ವಿವರಣೆಯಲ್ಲಿ ಸರಿಯಾದ ಪರಿಷ್ಕೃತ ನಕಾಶೆಗಳನ್ನು ಸಲ್ಲಿಸಲು 60 ದಿನಗಳ ಕಾಲಾವಕಾಶವನ್ನು ಕೋರಿರುತ್ತಾರೆ. 3 ವರ್ಷಗಳಾದರೂ ಪರಿಷ್ಕೃತ ನಕಾಶೆಗಳನ್ನು ಸಲ್ಲಿಸುವಲ್ಲಿ ವಿಫಲರಾಗಿರುವ ಕಾರಣ, ಕಾಲಾವಕಾಶ ಕೋರಿರುವುದನ್ನು ಅರ್ಜಿದಾರರ ಅನಾಸಕ್ತಿ ಎಂದು ಪರಿಗಣಿಸಿ, ಕೆಳಕಂಡ ಆದೇಶ.

**ಆದೇಶ**

ಸರ್ಕಾರದ ಆದೇಶ ಸಂಖ್ಯೆ: ಸಿಐ 03 ಎಂಎಂಎಂ 95 ದಿನಾಂಕ:27-05-1995 ಮತ್ತು ಸಿಐ 214 ಎಂಎಂಎಂ 2006 ದಿನಾಂಕ:09-02-2007ರನ್ವಯ ನಿರ್ದೇಶಕರು, ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ ಇವರಿಗೆ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಖನಿಜಾನ್ವೇಷಣಾ ಅರ್ಜಿ ಸಂಖ್ಯೆ:09 ಎಪಿಎಲ್ 2007ನ್ನು ಮೇಲೆ ವಿವರಿಸಿದ ಕಾರಣಗಳಿಗಾಗಿ ತಿರಸ್ಕರಿಸಲಾಗಿದೆ.

ನಿರ್ದೇಶಕರು

ಪಿ.ಆರ್.1008 ಗಣಿ ಮತ್ತು ಭೂ ವಿಜ್ಞಾನ ಇಲಾಖೆ, ಬೆಂಗಳೂರು.

**ನಿರ್ದೇಶಕರು, ಗಣಿ ಮತ್ತು ಭೂ ವಿಜ್ಞಾನ ಇಲಾಖೆ, ಬೆಂಗಳೂರು ಇವರ ನಡವಳಿಗಳು**

**ಸಂಖ್ಯೆ: ಗಭೂಇ:ಗಗುಶಾ:266 ಎಎಂಎಲ್10:10-11/2592, ದಿನಾಂಕ:15ನೇ ಜೂನ್, 2010**

**ವಿಷಯ:** ಶ್ರೀ ಬಿ.ಕೆ.ಪ್ರಸನ್ನ ಕುಮಾರ್ ರವರು ದಿನಾಂಕ: 02.03.2010 ರಂದು ಬಳ್ಳಾರಿ ಜಿಲ್ಲೆ, ಸಂಡೂರು ತಾಲ್ಲೂಕು, NEB ರೇಂಜ್ ನ 103.00 ಎಕರೆ ಪ್ರದೇಶದಲ್ಲಿ ಕಬ್ಬಿಣದ ಅದಿರು ಮತ್ತು ರೆಡ್ ಆಕ್ಸೈಡ್ ಖನಿಜಕ್ಕಾಗಿ ಸಲ್ಲಿಸಿರುವ ಗಣಿಗುತ್ತಿಗೆ ಅರ್ಜಿ ಬಗ್ಗೆ.

**ಉಲ್ಲೇಖ:**1. ಈ ಕಛೇರಿ ನೋಟೀಸ್ ಸಂಖ್ಯೆ: DMG: 266 AML 10:567 ದಿನಾಂಕ:03-05-2010.

2 ಅರ್ಜಿದಾರರ ವಿವರಣೆ ದಿ:21-05-2010.

**ಪ್ರಸ್ತಾವನೆ:**

ಶ್ರೀ ಬಿ.ಕೆ.ಪ್ರಸನ್ನ ಕುಮಾರ್ ಇವರು ಬಳ್ಳಾರಿ ಜಿಲ್ಲೆ ಸಂಡೂರು ತಾಲ್ಲೂಕು, NEB ರೇಂಜ್ ನ 103.00 ಎಕರೆ ಪ್ರದೇಶದಲ್ಲಿಕಬ್ಬಿಣದ ಅದಿರು ಮತ್ತು ರೆಡ್ ಆಕ್ಸೈಡ್ ಖನಿಜಕ್ಕಾಗಿ ಕೋರಿ ಸಲ್ಲಿಸಿರುವ ಗಣಿಗುತ್ತಿಗೆ ಅರ್ಜಿ ಸಂಖ್ಯೆ:266 ಎಎಂಎಲ್ 2010ನ್ನು ಪರಿಶೀಲಿಸಿದೆ.

ಅರ್ಜಿದಾರರು ಗಣಿಗುತ್ತಿಗೆಗಾಗಿ ಕೋರಿರುವ ಪ್ರದೇಶವು 15 ಪೂರ್ವ ಅರ್ಜಿಗಳ ಮೇಲೆ ಅತಿವ್ಯಾಪ್ತಿಯಾಗುತ್ತಿದ್ದು, ದಿನಾಂಕ:21–05–2010ರಂದು ಅರ್ಜಿದಾರರು ಉಲ್ಲೇಖಿತ (2)ರ ಪತ್ರದಲ್ಲಿ ನೀಡಿರುವ ವಿವರಣೆಯೊಂದಿಗೆ ಪರಿಷ್ಕೃತ ನಕ್ಷೆಯನ್ನು ಸಲ್ಲಿಸಲು 15 ದಿನಗಳ ಕಾಲಾವಕಾಶ ಕೋರಿರುತ್ತಾರೆ. ಆದರೆ, ಅಪೇಕ್ಷಿತ ಪ್ರದೇಶದೊಳಗಡೆ ಇರುವ ಪ್ರದೇಶಕ್ಕೆ ಮಾತ್ರ ಪರಿಷ್ಕೃತ ನಕ್ಷೆಯನ್ನು ಒಪ್ಪಿಕೊಳ್ಳುವುದರಿಂದ, ಅಪೇಕ್ಷಿತ ಪ್ರದೇಶವು ಪೂರ್ವ ಅರ್ಜಿಗಳ ಪ್ರದೇಶಕ್ಕೆ ಅತಿವ್ಯಾಪ್ತಿಯಾಗುತ್ತಿರುವುದರಿಂದ ಸಲ್ಲಿಸುವ ಪರಿಷ್ಕೃತ ನಕ್ಷೆಯು ಪ್ರಯೋಜನವಾಗದ ಹಿನ್ನೆಲೆಯಲ್ಲಿ ಕೆಳಕಂಡ ಆದೇಶ.

**ಆದೇಶ**

ಸರ್ಕಾರದ ಆದೇಶ ಸಂಖ್ಯೆ: ಸಿಐ 03 ಎಂಎಂಎಂ 95 ದಿನಾಂಕ:27–05–1995 ಮತ್ತು ಸಿಐ 214 ಎಂಎಂಎಂ 2006 ದಿನಾಂಕ:09–02–2007ರನ್ವಯ ನಿರ್ದೇಶಕರು, ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ ಇವರಿಗೆ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಗಣಿಗುತ್ತಿಗೆ ಅರ್ಜಿ ಸಂಖ್ಯೆ 266 ಎಎಂಎಲ್ 2010ನ್ನು ಮೇಲೆ ವಿವರಿಸಿದ ಕಾರಣಗಳಿಗಾಗಿ ತಿರಸ್ಕರಿಸಲಾಗಿದೆ.

ನಿರ್ದೇಶಕರು
ಗಣಿ ಮತ್ತು ಭೂ ವಿಜ್ಞಾನ ಇಲಾಖೆ, ಬೆಂಗಳೂರು.

**ನಿರ್ದೇಶಕರು, ಗಣಿ ಮತ್ತು ಭೂ ವಿಜ್ಞಾನ ಇಲಾಖೆ, ಬೆಂಗಳೂರು ಇವರ ನಡವಳಿಗಳು**

**ಸಂಖ್ಯೆ: ಗಭೂಇ:ಗಗುಶಾ:350 ಎಎಂಎಲ್ 93: 10–11/2594, ದಿನಾಂಕ:15ನೇ ಜೂನ್, 2010**

**ವಿಷಯ:** ಶ್ರೀ ಅಶೋಕ್ ಕುಮಾರ್ ಜೈನ್ ರವರು ದಿನಾಂಕ: 16–10–1993 ರಂದು ಬಳ್ಳಾರಿ ಜಿಲ್ಲೆ, ಸಂಡೂರು ತಾಲ್ಲೂಕು, ಯರ್ರಯ್ಯನಹಳ್ಳಿ ಗ್ರಾಮದ 30.00 ಎಕರೆ ಪ್ರದೇಶದಲ್ಲಿ ಚೈನಾ ಕ್ಲೇ & ಯಲ್ಲೋ ಓಕರ್ ಖನಿಜಕ್ಕಾಗಿ ಸಲ್ಲಿಸಿರುವ ಗಣಿಗುತ್ತಿಗೆ ಅರ್ಜಿ ಬಗ್ಗೆ.

**ಉಲ್ಲೇಖ:** ಜಿಲ್ಲಾಧಿಕಾರಿ, ಬಳ್ಳಾರಿ ರವರ ಪತ್ರ ಸಂಖ್ಯೆ: 350 AML 93:17715 ದಿನಾಂಕ: 13–01–1998.

**ಪ್ರಸ್ತಾವನೆ:**

ಶ್ರೀ ಅಶೋಕ್ ಕುಮಾರ್ ಜೈನ್ ರವರು ಬಳ್ಳಾರಿ ಜಿಲ್ಲೆ ಸಂಡೂರು ತಾಲ್ಲೂಕು, ಯರ್ರಯ್ಯನಹಳ್ಳಿ ಗ್ರಾಮದ 30.00 ಎಕರೆ ಪ್ರದೇಶದಲ್ಲಿಚೈನಾ ಕ್ಲೇ & ಯಲ್ಲೋ ಓಕರ್ ಖನಿಜಕ್ಕಾಗಿ ಕೋರಿ ಸಲ್ಲಿಸಿರುವ ಗಣಿಗುತ್ತಿಗೆ ಅರ್ಜಿ ಸಂಖ್ಯೆ:350 ಎಎಂಎಲ್ 1993ನ್ನು ಪರಿಶೀಲಿಸಿದೆ.

ಅರ್ಜಿದಾರರು ಗಣಿಗುತ್ತಿಗೆಗಾಗಿ ಕೋರಿರುವ ಪ್ರದೇಶಕ್ಕೆ ಸರ್ವೆನಂಬರ್ ಇರುವುದಿಲ್ಲವಾದ್ದರಿಂದ ತಿರಸ್ಕರಿಸಲು ಕಂದಾಯ ಇಲಾಖೆಯಿಂದ ಅಭಿಪ್ರಾಯ ಬಂದಿದ್ದು, ಅರ್ಜಿದಾರರು ಶಾಸನಬದ್ಧ ತೀರುವಳಿ ಪತ್ರಗಳನ್ನು ಸಲ್ಲಿಸಿರುವುದಿಲ್ಲ. ಆದುದರಿಂದ ಅರ್ಜಿಯನ್ನು ಮುಂದುವರಿಸಲು ಅರ್ಜಿದಾರರಿಗೆ ಆಸಕ್ತಿ ಇಲ್ಲವೆಂದು ಭಾವಿಸಿ, ಕೆಳಕಂಡ ಆದೇಶ

**ಆದೇಶ**

ಸರ್ಕಾರದ ಆದೇಶ ಸಂಖ್ಯೆ: ಸಿಐ 03 ಎಂಎಂಎಂ 95 ದಿನಾಂಕ:27–05–1995 ಮತ್ತು ಸಿಐ 214 ಎಂಎಂಎಂ 2006 ದಿನಾಂಕ:09–02–2007ರನ್ವಯ ನಿರ್ದೇಶಕರು, ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ ಇವರಿಗೆ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಗಣಿಗುತ್ತಿಗೆ ಅರ್ಜಿ ಸಂಖ್ಯೆ 350 ಎಎಂಎಲ್ 1993ನ್ನು ಮೇಲೆ ವಿವರಿಸಿದ ಕಾರಣಗಳಿಗಾಗಿ ತಿರಸ್ಕರಿಸಲಾಗಿದೆ.

ನಿರ್ದೇಶಕರು
ಗಣಿ ಮತ್ತು ಭೂ ವಿಜ್ಞಾನ ಇಲಾಖೆ, ಬೆಂಗಳೂರು.

**ನಿರ್ದೇಶಕರು, ಗಣಿ ಮತ್ತು ಭೂ ವಿಜ್ಞಾನ ಇಲಾಖೆ, ಬೆಂಗಳೂರು ಇವರ ನಡವಳಿಗಳು**

**ಸಂಖ್ಯೆ: ಗಭೂಇ:ಗಗುಶಾ:394 ಎಎಂಎಲ್ 93: 10–11/2598, ದಿನಾಂಕ:15ನೇ ಜೂನ್, 2010**

**ವಿಷಯ:** ಶ್ರೀ ಉದಯಚಂದ್ ಸಿಂಘಿ ರವರು ದಿನಾಂಕ:29.12.1993 ರಂದು ಬಳ್ಳಾರಿ ಜಿಲ್ಲೆ, ಸಂಡೂರು ತಾಲ್ಲೂಕು, ಹುಲಿಕುಂಟೆ & ಸ್ವಾಮಿಹಳ್ಳಿ ಗ್ರಾಮದ 120–00 ಎಕರೆ ಪ್ರದೇಶದಲ್ಲಿ ಕಬ್ಬಿಣದ ಅದಿರು ಖನಿಜಕ್ಕಾಗಿ ಸಲ್ಲಿಸಿರುವ ಗಣಿಗುತ್ತಿಗೆ ಅರ್ಜಿ ಬಗ್ಗೆ.

**ಉಲ್ಲೇಖ:** 1. ಈ ಕಛೇರಿ ನೋಟೀಸ್ ಸಂಖ್ಯೆ:394 ಎಎಂಎಲ್ 93:1064–65, ದಿನಾಂಕ:20.04.2010.

2. ಅರ್ಜಿದಾರರ ವಿವರಣೆ ದಿನಾಂಕ:14.05.2010.

**ಪ್ರಸ್ತಾವನೆ:**

ಶ್ರೀ ಉದಯಚಂದ್ ಸಿಂಘಿ ರವರು ಬಳ್ಳಾರಿ ಜಿಲ್ಲೆ, ಸಂಡೂರು ತಾಲ್ಲೂಕು, ಹುಲಿಕುಂಟೆ & ಸ್ವಾಮಿಹಳ್ಳಿ ಗ್ರಾಮದ 120–00 ಎಕರೆ ಪ್ರದೇಶದಲ್ಲಿ ಕಬ್ಬಿಣದ ಅದಿರು ಖನಿಜಕ್ಕಾಗಿ ಕೋರಿ ಸಲ್ಲಿಸಿರುವ ಗಣಿ ಗುತ್ತಿಗೆ ಅರ್ಜಿ ಸಂಖ್ಯೆ:394 ಎಎಂಎಲ್ 93ನ್ನು ಪರಿಶೀಲಿಸಿದೆ.

ಅರ್ಜಿದಾರರು ಗಣಿಗುತ್ತಿಗೆಗಾಗಿ ಕೋರಿರುವ ಪ್ರದೇಶವು ಪೂರ್ವ ಗಣಿ ಗುತ್ತಿಗೆ ಅರ್ಜಿ 70 AML 79, 184 AML 93, 85 AML 93, 40 APL 91ರ ಪ್ರದೇಶದ ಮೇಲೆ ಅತಿವ್ಯಾಪ್ತಿಯಾಗುತ್ತಿದ್ದು, ಈ ಬಗ್ಗೆ ಉಲ್ಲೇಖ (1)ರ ಈ ಕಛೇರಿ ನೋಟೀಸ್‌ಗೆ ಅರ್ಜಿದಾರರು ಉಲ್ಲೇಖ (2)ರಲ್ಲಿ ಉತ್ತರಿಸುತ್ತಾ, ಎಲ್ಲಾ ಅರ್ಜಿಗಳ ಸಂಯುಕ್ತ ನಕಾಶೆಯನ್ನು ಒದಗಿಸುವಂತೆ ಕೋರಿರುತ್ತಾರೆ. ಆದರೆ, ಸಂಯುಕ್ತ ನಕಾಶೆಯನ್ನು ಪೂರೈಸುವ ವ್ಯವಸ್ಥೆ ಇರುವುದಿಲ್ಲ. ಅಪೇಕ್ಷಿತ ಪ್ರದೇಶವು ಪೂರ್ಣ ಪ್ರಮಾಣದಲ್ಲಿ ಅತಿವ್ಯಾಪ್ತಿಯಾಗುತ್ತಿದ್ದು, ಸದರಿ ಗಣಿಗುತ್ತಿಗೆ ಅರ್ಜಿಯನ್ನು ಪರಿಗಣಿಸಲು ಸ್ಥಳದ ಲಭ್ಯತೆ ಇಲ್ಲದೇ ಇರುವ ಹಿನ್ನೆಲೆಯಲ್ಲಿ ಕೆಳಕಂಡ ಆದೇಶ.

**ಆದೇಶ**

ಸರ್ಕಾರದ ಆದೇಶ ಸಂಖ್ಯೆ: ಸಿಐ 03 ಎಂಎಂಎಂ 95 ದಿನಾಂಕ:27–05–1995 ಮತ್ತು ಸಿಐ 214 ಎಂಎಂಎಂ 2006 ದಿನಾಂಕ:09–02–2007ರನ್ವಯ ನಿರ್ದೇಶಕರು, ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ ಇವರಿಗೆ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಗಣಿಗುತ್ತಿಗೆ ಅರ್ಜಿ ಸಂಖ್ಯೆ 394 ಎಎಂಎಲ್ 93ನ್ನು ಮೇಲೆ ವಿವರಿಸಿದ ಕಾರಣಗಳಿಗಾಗಿ ತಿರಸ್ಕರಿಸಲಾಗಿದೆ.

ನಿರ್ದೇಶಕರು
ಗಣಿ ಮತ್ತು ಭೂ ವಿಜ್ಞಾನ ಇಲಾಖೆ, ಬೆಂಗಳೂರು.

**ನಿರ್ದೇಶಕರು, ಗಣಿ ಮತ್ತು ಭೂ ವಿಜ್ಞಾನ ಇಲಾಖೆ, ಬೆಂಗಳೂರು ಇವರ ನಡವಳಿಗಳು**

**ಸಂಖ್ಯೆ: ಗಭೂಇ:ಗಗುಶಾ:1134 ಎಎಂಎಲ್2006: 10–11/2596, ದಿನಾಂಕ:15ನೇ ಜೂನ್, 2010**

**ವಿಷಯ:** ಶ್ರೀ ಟಿ.ರವಿ ರವರು ದಿ:01–12–2006ರಂದು ಬಳ್ಳಾರಿ ಜಿಲ್ಲೆ, ಸಂಡೂರು ತಾಲ್ಲೂಕು, ದೇವಗಿರಿ ಗ್ರಾಮದ 30.00 ಎಕರೆ ಪ್ರದೇಶದಲ್ಲಿಕಬ್ಬಿಣದ ಅದಿರು ಖನಿಜಕ್ಕಾಗಿ ಸಲ್ಲಿಸಿರುವ ಗಣಿಗುತ್ತಿಗೆ ಅರ್ಜಿ ಬಗ್ಗೆ.

**ಉಲ್ಲೇಖ:** 1. ಈ ಕಛೇರಿ ನೋಟೀಸ್ ಸಂಖ್ಯೆ:1134 ಎಎಂಎಲ್ 2006:5639–40 ದಿನಾಂಕ:25–03–2010.
2. ಅರ್ಜಿದಾರರ ವಿವರಣೆ ದಿ:13–04–2010.

**ಪ್ರಸ್ತಾವನೆ:**

ಶ್ರೀ ಟಿ.ರವಿ ರವರು ಬಳ್ಳಾರಿ ಜಿಲ್ಲೆ ಸಂಡೂರು ತಾಲ್ಲೂಕು, ದೇವಗಿರಿ ಗ್ರಾಮದ 30.00 ಎಕರೆ ಪ್ರದೇಶದಲ್ಲಿಕಬ್ಬಿಣದ ಅದಿರು ಖನಿಜಕ್ಕಾಗಿ ಕೋರಿ ಸಲ್ಲಿಸಿರುವ ಗಣಿ ಗುತ್ತಿಗೆ ಅರ್ಜಿ ಸಂಖ್ಯೆ: 1134 ಎಎಂಎಲ್ 2006 ನ್ನು ಪರಿಶೀಲಿಸಿದೆ.

ಅರ್ಜಿದಾರರು ಗಣಿಗುತ್ತಿಗೆಗಾಗಿ ಕೋರಿರುವ ಪ್ರದೇಶವು ಇತರೆ ಪೂರ್ವ ಅರ್ಜಿಗಳಾದ 751 AML 06, 358 AML 95 358 AML 06, 530 AML 06, 1259 AML 06, 59 AML 06 ಗಳ ಪ್ರದೇಶದ ಮೇಲೆ ಪೂರ್ಣ ಪ್ರಮಾಣದಲ್ಲಿ ಅತಿವ್ಯಾಪ್ತಿಯಾಗುತ್ತಿದ್ದು, ಈ ಬಗ್ಗೆ ಉಲ್ಲೇಖ (1)ರ ಈ ಕಛೇರಿ ನೋಟೀಸ್‌ಗೆ ಅರ್ಜಿದಾರರು ಉಲ್ಲೇಖ (2)ರಲ್ಲಿ ನೀಡಿರುವ ವಿವರಣೆಯ ನೀಡುತ್ತಾ, ಮುಕ್ತ ಪ್ರದೇಶಕ್ಕೆ ತಮ್ಮ ಅರ್ಜಿಯನ್ನು ಪರಿಗಣಿಸಲು ಕೋರಿರುತ್ತಾರೆ. ಮತ್ತೊಮ್ಮೆ ಪರಿಶೀಲಿಸಲಾಗಿ ಅಪೇಕ್ಷಿತ ಪ್ರದೇಶವು ಪೂರ್ಣ ಪ್ರಮಾಣದಲ್ಲಿ ಅತಿವ್ಯಾಪ್ತಿಯಾಗುತ್ತಿರುವುದರಿಂದ ಸ್ಥಳದ ಲಭ್ಯತೆ ಇಲ್ಲದೇ ಇರುವ ಹಿನ್ನೆಲೆಯಲ್ಲಿ ಕೆಳಕಂಡ ಆದೇಶ.

**ಆದೇಶ**

ಸರ್ಕಾರದ ಆದೇಶ ಸಂಖ್ಯೆ: ಸಿಐ 03 ಎಂಎಂಎಂ 95 ದಿನಾಂಕ:27–05–1995 ಮತ್ತು ಸಿಐ 214 ಎಂಎಂಎಂ 2006 ದಿನಾಂಕ:09–02–2007ರನ್ವಯ ನಿರ್ದೇಶಕರು, ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ ಇವರಿಗೆ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಗಣಿಗುತ್ತಿಗೆ ಅರ್ಜಿ ಸಂಖ್ಯೆ 1134 ಎಎಂಎಲ್ 2006 ನ್ನು ಮೇಲೆ ವಿವರಿಸಿದ ಕಾರಣಗಳಿಗಾಗಿ ತಿರಸ್ಕರಿಸಲಾಗಿದೆ.

ನಿರ್ದೇಶಕರು
ಪಿ.ಆರ್.1009 ಗಣಿ ಮತ್ತು ಭೂ ವಿಜ್ಞಾನ ಇಲಾಖೆ, ಬೆಂಗಳೂರು.

**ನಿರ್ದೇಶಕರು, ಗಣಿ ಮತ್ತು ಭೂ ವಿಜ್ಞಾನ ಇಲಾಖೆ, ಬೆಂಗಳೂರು ಇವರ ನಡವಳಿಗಳು**

**ಸಂಖ್ಯೆ: ಗಭೂಇ:ಗಗುಶಾ:255 ಎಎಂಎಲ್ 07:10–11/2586, ದಿನಾಂಕ:15ನೇ ಜೂನ್, 2010**

**ವಿಷಯ:** ಮೆ: ಬಾಲಾಜಿ ಎಂಟರ್ ಪ್ರೈಸಸ್ ರವರು ದಿನಾಂಕ:14.02.2007ರಂದು ಬಳ್ಳಾರಿ ಜಿಲ್ಲೆ ಮತ್ತು ತಾಲ್ಲೂಕು, ಹರಗಿನದೋಣಿ ಗ್ರಾಮದ 275–20 ಹೆಕ್ಟೇರ್ ಪ್ರದೇಶದಲ್ಲಿ ಕಬ್ಬಿಣದ ಅದಿರು, BHQ & Associated minerals ಗಾಗಿ ಸಲ್ಲಿಸಿರುವ ಗಣಿಗುತ್ತಿಗೆ ಅರ್ಜಿ ಬಗ್ಗೆ.

**ಉಲ್ಲೇಖ:** 1. ಈ ಕಛೇರಿ ನೋಟೀಸ್ ಸಂಖ್ಯೆ:255 ಎಎಂಎಲ್ 07:18386–87, ದಿನಾಂಕ:19.02.2010.

2. ಅರ್ಜಿದಾರರ ವಿವರಣೆ ದಿನಾಂಕ:29.03.2010.

**ಪ್ರಸ್ತಾವನೆ:**

ಮೆ: ಬಾಲಾಜಿ ಎಂಟರ್ ಪ್ರೈಸಸ್ ರವರು ಬಳ್ಳಾರಿ ಜಿಲ್ಲೆ ಮತ್ತು ತಾಲ್ಲೂಕು, ಹರಗಿನದೋಣಿ ಗ್ರಾಮದ 275–20 ಹೆಕ್ಟೇರ್ ಪ್ರದೇಶದಲ್ಲಿ ಕಬ್ಬಿಣದ ಅದಿರು, BHQ & Associated minerals ಗೆ ಕೋರಿ ಸಲ್ಲಿಸಿರುವ ಗಣಿಗುತ್ತಿಗೆ ಅರ್ಜಿ ಸಂಖ್ಯೆ: 255 ಎಎಂಎಲ್ 07ನ್ನು ಪರಿಶೀಲಿಸಿದೆ.

ಅರ್ಜಿದಾರರು ಗಣಿಗುತ್ತಿಗೆಗಾಗಿ ಕೋರಿರುವ ಪ್ರದೇಶವು PL No.3362ರ ಪ್ರದೇಶಕ್ಕೆ ಅತಿವ್ಯಾಪ್ತಿಯಾಗುತ್ತಿದ್ದು, ಈ ಬಗ್ಗೆ ಉಲ್ಲೇಖ (1)ರ ಈ ಕಛೇರಿ ನೋಟೀಸ್‌ಗೆ ಅರ್ಜಿದಾರರು ಉಲ್ಲೇಖ (2)ರಲ್ಲಿ ನೀಡಿರುವ ಉತ್ತರವನ್ನು ಪರಿಗಣಿಸಲು ಅಪೇಕ್ಷಿತ ಪ್ರದೇಶವು ಪೂರ್ಣ ಪ್ರಮಾಣದಲ್ಲಿ ಅತಿವ್ಯಾಪ್ತಿಯಾಗುತ್ತಿದ್ದು, ಸ್ಥಳದ ಲಭ್ಯತೆ ಇಲ್ಲದೇ ಇರುವ ಹಿನ್ನೆಲೆಯಲ್ಲಿ ಕೆಳಕಂಡ ಆದೇಶ.

**ಆದೇಶ**

ಸರ್ಕಾರದ ಆದೇಶ ಸಂಖ್ಯೆ: ಸಿಐ 03 ಎಂಎಂಎಂ 95 ದಿನಾಂಕ:27–05–1995 ಮತ್ತು ಸಿಐ 214 ಎಂಎಂಎಂ 2006 ದಿನಾಂಕ:09–02–2007ರನ್ವಯ ನಿರ್ದೇಶಕರು, ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ ಇವರಿಗೆ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಗಣಿಗುತ್ತಿಗೆ ಅರ್ಜಿ ಸಂಖ್ಯೆ:255 ಎಎಂಎಲ್ 07ನ್ನು ಮೇಲೆ ವಿವರಿಸಿದ ಕಾರಣಗಳಿಗಾಗಿ ತಿರಸ್ಕರಿಸಲಾಗಿದೆ.

ನಿರ್ದೇಶಕರು
ಗಣಿ ಮತ್ತು ಭೂ ವಿಜ್ಞಾನ ಇಲಾಖೆ, ಬೆಂಗಳೂರು.

**ನಿರ್ದೇಶಕರು, ಗಣಿ ಮತ್ತು ಭೂ ವಿಜ್ಞಾನ ಇಲಾಖೆ, ಬೆಂಗಳೂರು ಇವರ ನಡವಳಿಗಳು**

**ಸಂಖ್ಯೆ: ಗಭೂಇ:ಗಗುಶಾ:03 ಎಪಿಎಲ್ 99:10–11/2586, ದಿನಾಂಕ:15ನೇ ಜೂನ್, 2010**

**ವಿಷಯ:** M/s Shaz Enterprises ಇವರು ದಿನಾಂಕ:14.01.1999 ರಂದು ಬಳ್ಳಾರಿ ಜಿಲ್ಲೆ, ಸಂಡೂರು ತಾಲ್ಲೂಕು, ಟುಮಟಿ ಗ್ರಾಮದ 288–00 ಎಕರೆ ಪ್ರದೇಶದಲ್ಲಿ ಕಬ್ಬಿಣದ ಅದಿರು ಖನಿಜಕ್ಕಾಗಿ ಸಲ್ಲಿಸಿರುವ ಖನಿಜಾನ್ವೇಷಣಾ ಲೈಸೆನ್ಸ್ ಅರ್ಜಿ ಬಗ್ಗೆ.

**ಉಲ್ಲೇಖ:** 1. ಈ ಕಛೇರಿ ನೋಟೀಸ್ ಸಂಖ್ಯೆ:ಗಭೂಇ: ಗಗುಶಾ:03ಎಪಿಎಲ್ 99/10–11,968–69, ದಿನಾಂಕ:20.04.2010.

2. ಅರ್ಜಿದಾರರ ವಿವರಣೆ ದಿನಾಂಕ:19.05.2010.

**ಪ್ರಸ್ತಾವನೆ:**

M/s Shaz Enterprises ಇವರು ಬಳ್ಳಾರಿ ಜಿಲ್ಲೆ, ಸಂಡೂರು ತಾಲ್ಲೂಕು, ಟುಮಟಿ ಗ್ರಾಮದ 288–00 ಎಕರೆ ಪ್ರದೇಶದಲ್ಲಿ ಕಬ್ಬಿಣದ ಅದಿರು ಖನಿಜಕ್ಕಾಗಿ ಅನ್ವೇಷಣಾ ಲೈಸೆನ್ಸ್ ಕೋರಿ ಸಲ್ಲಿಸಿರುವ ಅರ್ಜಿ ಸಂಖ್ಯೆ:03 ಎಪಿಎಲ್ 99ನ್ನು ಪರಿಶೀಲಿಸಿದೆ.

ಖನಿಜಾನ್ವೇಷಣಾ ಲೈಸೆನ್ಸ್‌ಗಾಗಿ ಕೋರಿರುವ ಪ್ರದೇಶದ ಸರಿಯಾದ ನಕಾಶೆಯನ್ನು ಸಲ್ಲಿಸುವಂತೆ ಉಲ್ಲೇಖ (1)ರ ಈ ಕಛೇರಿ ನೋಟೀಸ್‌ನಲ್ಲಿ ತಿಳಿಸಲಾಗಿದ್ದು, ಅದಕ್ಕೆ ಅರ್ಜಿದಾರರು ಉಲ್ಲೇಖ (2)ರ ತಮ್ಮ ವಿವರಣೆಯಲ್ಲಿ 90 ದಿನಗಳ ಕಾಲಾವಕಾಶವನ್ನು ಕೋರಿರುತ್ತಾರೆ. ದಿನಾಂಕ:20.04.2010ರ ಈ ಕಛೇರಿ ನೋಟೀಸ್‌ನಲ್ಲಿ 30 ದಿನಗಳ ಕಾಲಾವಕಾಶವನ್ನು ನೀಡಿದ್ದರೂ ಸಹ ಮತ್ತೆ 90 ದಿನಗಳ ಕಾಲಾವಕಾಶವನ್ನು ಕೋರುತ್ತಿರುವುದು ಅರ್ಜಿದಾರರಿಗೆ ಅನ್ವೇಷಣಾ ಲೈಸೆನ್ಸ್ ಅರ್ಜಿಯನ್ನು ಮುಂದುವರಿಸಲು ಆಸಕ್ತಿ ಇಲ್ಲವೆಂದು ಪರಿಗಣಿಸಿ, ಕೆಳಕಂಡ ಆದೇಶ.

**ಆದೇಶ**

ಸರ್ಕಾರದ ಆದೇಶ ಸಂಖ್ಯೆ: ಸಿಐ 03 ಎಂಎಂಎಂ 95 ದಿನಾಂಕ:27-05-1995 ಮತ್ತು ಸಿಐ 214 ಎಂಎಂಎಂ 2006 ದಿನಾಂಕ:09-02-2007ರನ್ವಯ ನಿರ್ದೇಶಕರು, ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ ಇವರಿಗೆ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಖನಿಜಾನ್ವೇಷಣಾ ಅರ್ಜಿ ಸಂಖ್ಯೆ: 03 ಎಪಿಎಲ್ 99ನ್ನು ಮೇಲೆ ವಿವರಿಸಿದ ಕಾರಣಗಳಿಗಾಗಿ ತಿರಸ್ಕರಿಸಲಾಗಿದೆ.

ನಿರ್ದೇಶಕರು

ಗಣಿ ಮತ್ತು ಭೂ ವಿಜ್ಞಾನ ಇಲಾಖೆ, ಬೆಂಗಳೂರು.

**ನಿರ್ದೇಶಕರು, ಗಣಿ ಮತ್ತು ಭೂ ವಿಜ್ಞಾನ ಇಲಾಖೆ, ಬೆಂಗಳೂರು ಇವರ ನಡವಳಿಗಳು**

**ಸಂಖ್ಯೆ: ಗಭೂಇ:ಗಗುಶಾ:1096 ಎಎಂಎಲ್2006: 10-11/2588, ದಿನಾಂಕ:15ನೇ ಜೂನ್, 2010**

**ವಿಷಯ:** ಶ್ರೀ ಎ.ಅಮರೇಶಪ್ಪ ರವರು ದಿನಾಂಕ: 17-11-2006ರಂದು ಬಳ್ಳಾರಿ ಜಿಲ್ಲೆ, ಸಂಡೂರು ತಾಲ್ಲೂಕು, ರಾಮಘಡ ಗ್ರಾಮದ 110-00 ಎಕರೆ ಪ್ರದೇಶದಲ್ಲಿಕಬ್ಬಿಣದ ಅದಿರು ಖನಿಜಕ್ಕಾಗಿ ಸಲ್ಲಿಸಿರುವ ಗಣಿಗುತ್ತಿಗೆ ಅರ್ಜಿ ಬಗ್ಗೆ.

**ಉಲ್ಲೇಖ:** 1. ಈ ಕಛೇರಿ ನೋಟೀಸ್ ಸಂಖ್ಯೆ:1096 ಎಎಂಎಲ್ 2006:5659-60 ದಿನಾಂಕ:25-03-2010.

2. ಅರ್ಜಿದಾರರ ವಿವರಣೆ ದಿ:31-03-2010.

**ಪ್ರಸ್ತಾವನೆ:**

ಶ್ರೀ ಎ.ಅಮರೇಶಪ್ಪ ರವರು ಬಳ್ಳಾರಿ ಜಿಲ್ಲೆ ಸಂಡೂರು ತಾಲ್ಲೂಕು, ರಾಮಘಡ ಗ್ರಾಮದ 110-00 ಎಕರೆ ಪ್ರದೇಶದಲ್ಲಿಕಬ್ಬಿಣದ ಅದಿರು & ಮ್ಯಾಂಗನೀಸ್ ಓರ್ ಖನಿಜಕ್ಕಾಗಿ ಕೋರಿ ಸಲ್ಲಿಸಿರುವ ಗಣಿ ಗುತ್ತಿಗೆ ಅರ್ಜಿ ಸಂಖ್ಯೆ: 1096 ಎಎಂಎಲ್ 2006ನ್ನು ಪರಿಶೀಲಿಸಿದೆ.

ಅರ್ಜಿದಾರರು ಗಣಿಗುತ್ತಿಗೆಗಾಗಿ ಕೋರಿರುವ ಪ್ರದೇಶವು ಪೂರ್ವ ಅರ್ಜಿ 44 AML 05ರ ಪ್ರದೇಶದ ಮೇಲೆ ಅತಿವ್ಯಾಪ್ತಿಯಾಗುತ್ತಿದ್ದು, ಈ ಬಗ್ಗೆ ಉಲ್ಲೇಖ (1)ರ ಈ ಕಛೇರಿ ನೋಟೀಸ್‌ಗೆ ಅರ್ಜಿದಾರರು ಉಲ್ಲೇಖ (2)ರಲ್ಲಿ ನೀಡಿರುವ ವಿವರಣೆಯಲ್ಲಿ ಸ್ಥಳದ ಲಭ್ಯತೆ ಬಗ್ಗೆ ಕೋರಿಕೊಂಡು, ಮುಕ್ತ ಪ್ರದೇಶವನ್ನು ಪರಿಗಣಿಸುವಂತೆ ಕೋರಿರುತ್ತಾರೆ. ಪೂರ್ಣ ಪ್ರಮಾಣದಲ್ಲಿ ಅತಿವ್ಯಾಪ್ತಿಯಾಗುತ್ತಿದ್ದು, ಸದರಿ ಗಣಿಗುತ್ತಿಗೆ ಅರ್ಜಿಯನ್ನು ಪರಿಗಣಿಸಲು ಸ್ಥಳದ ಲಭ್ಯತೆ ಇಲ್ಲದೇ ಇರುವ ಹಿನ್ನೆಲೆಯಲ್ಲಿ ಕೆಳಕಂಡ ಆದೇಶ.

**ಆದೇಶ**

ಸರ್ಕಾರದ ಆದೇಶ ಸಂಖ್ಯೆ: ಸಿಐ 03 ಎಂಎಂಎಂ 95 ದಿನಾಂಕ:27-05-1995 ಮತ್ತು ಸಿಐ 214 ಎಂಎಂಎಂ 2006 ದಿನಾಂಕ:09-02-2007ರನ್ವಯ ನಿರ್ದೇಶಕರು, ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ ಇವರಿಗೆ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಗಣಿಗುತ್ತಿಗೆ ಅರ್ಜಿ ಸಂಖ್ಯೆ 1096 ಎಎಂಎಲ್ 2006 ನ್ನು ಮೇಲೆ ವಿವರಿಸಿದ ಕಾರಣಗಳಿಗಾಗಿ ತಿರಸ್ಕರಿಸಲಾಗಿದೆ.

ನಿರ್ದೇಶಕರು

ಗಣಿ ಮತ್ತು ಭೂ ವಿಜ್ಞಾನ ಇಲಾಖೆ, ಬೆಂಗಳೂರು.

**ನಿರ್ದೇಶಕರು, ಗಣಿ ಮತ್ತು ಭೂ ವಿಜ್ಞಾನ ಇಲಾಖೆ, ಬೆಂಗಳೂರು ಇವರ ನಡವಳಿಗಳು**

**ಸಂಖ್ಯೆ: ಗಭೂಇ:ಗಗುಶಾ:05 ಎಪಿಎಲ್2007: 10-11/2590, ದಿನಾಂಕ:15ನೇ ಜೂನ್, 2010**

**ವಿಷಯ:** ಮೆ: ವಿಐಎಸ್‌ವಿ ಅಲ್ಯುಮಿನಿಯಂ ಕಂ.ಪ್ರೈ.ಲಿ., ಇವರು ಬಳ್ಳಾರಿ ಜಿಲ್ಲೆ, ಸಂಡೂರು ತಾಲ್ಲೂಕು, ಬಿಜಿಲಮ್ಮಗುಡ್ಡ ಗ್ರಾಮದ 350 ಹೆಕ್ಟೇರ್ ಪ್ರದೇಶದಲ್ಲಿ ಕಬ್ಬಿಣದ ಅದಿರು ಮತ್ತು ಅಸೋಸಿಯೇಟೆಡ್ ಖನಿಜಕ್ಕಾಗಿ ಸಲ್ಲಿಸಿರುವ ಖನಿಜಾನ್ವೇಷಣಾ ಲೈಸೆನ್ಸ್ ಅರ್ಜಿ ಬಗ್ಗೆ.

**ಉಲ್ಲೇಖ:** 1. ಈ ಕಛೇರಿ ನೋಟೀಸ್ ಸಂಖ್ಯೆ:ಗಭೂಇ:ಗಗುಶಾ:05 APL 07/10-11 938-39 ದಿನಾಂಕ:20.04.2010.

2. ಅರ್ಜಿದಾರರ ವಿವರಣೆ ದಿ:06-05-2010.

**ಪ್ರಸ್ತಾವನೆ:**

ಮೆ:ವಿಐಎಸ್‌ವಿ ಅಲ್ಯುಮಿನಿಯಂ ಕಂ.ಪ್ರೈ.ಲಿ., ಇವರು ಬಳ್ಳಾರಿ ಜಿಲ್ಲೆ, ಸಂಡೂರು ತಾಲ್ಲೂಕು, ಬಿಜಿಲಮ್ಮ ಗುಡ್ಡ ಗ್ರಾಮದ 350 ಹೆಕ್ಟೇರ್ ಪ್ರದೇಶದಲ್ಲಿಕಬ್ಬಿಣದ ಅದಿರು ಮತ್ತು ಅಸೋಸಿಯೇಟೆಡ್ ಖನಿಜಕ್ಕಾಗಿ ಅನ್ವೇಷಣಾ ಲೈಸೆನ್ಸ್ ಕೋರಿ ಸಲ್ಲಿಸಿರುವ ಅರ್ಜಿ ಸಂಖ್ಯೆ:05 ಎಪಿಎಲ್ 2007ನ್ನು ಪರಿಶೀಲಿಸಿದೆ.

ಖನಿಜಾನ್ವೇಷಣಾ ಲೈಸೆನ್ಸ್‌ಗಾಗಿ ಕೋರಿರುವ ಪ್ರದೇಶದ ಸರಿಯಾದ ನಕಾಶೆಯನ್ನು ಸಲ್ಲಿಸುವಂತೆ ದಿನಾಂಕ:30–10–2007ರಂದು ಅರ್ಜಿದಾರರಿಗೆ ಪತ್ರಬರೆಯಲಾಗಿತ್ತು. ಉಲ್ಲೇಖ (1)ರ ಈ ಕಛೇರಿ ನೋಟೀಸ್‌ನಲ್ಲಿ ಈ ಬಗ್ಗೆ ತಿಳಿಸಲಾಗಿದ್ದು, ಅದಕ್ಕೆ ಅರ್ಜಿದಾರರು ಉಲ್ಲೇಖ(2)ರ ತಮ್ಮ ವಿವರಣೆಯಲ್ಲಿ 60 ದಿನಗಳ ಕಾಲಾವಕಾಶವನ್ನು ಕೋರಿರುತ್ತಾರೆ. 30–10–2007ರಿಂದ 3ವರ್ಷಗಳಾದರೂ ಪರಿಷ್ಕೃತ ನಕಾಶೆಯನ್ನು ಸಲ್ಲಿಸುವಲ್ಲಿ ವಿಫಲರಾಗಿರುವ ಕಾರಣ, ಕಾಲಾವಕಾಶ ಕೋರಿರುವುದನ್ನು ಅರ್ಜಿದಾರರ ಅನಾಸಕ್ತಿ ಎಂದು ಪರಿಗಣಿಸಿ, ಕೆಳಕಂಡ ಆದೇಶ.

**ಆದೇಶ**

ಸರ್ಕಾರದ ಆದೇಶ ಸಂಖ್ಯೆ: ಸಿಐ 03 ಎಂಎಂಎಂ 95 ದಿನಾಂಕ:27–05–1995 ಮತ್ತು ಸಿಐ 214 ಎಂಎಂಎಂ 2006 ದಿನಾಂಕ:09–02–2007ರನ್ವಯ ನಿರ್ದೇಶಕರು, ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ ಇವರಿಗೆ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಖನಿಜಾನ್ವೇಷಣಾ ಅರ್ಜಿ ಸಂಖ್ಯೆ 05 ಎಪಿಎಲ್ 2007ನ್ನು ಮೇಲೆ ವಿವರಿಸಿದ ಕಾರಣಗಳಿಗಾಗಿ ತಿರಸ್ಕರಿಸಲಾಗಿದೆ.

ನಿರ್ದೇಶಕರು

ಪಿ.ಆರ್.1010 ಗಣಿ ಮತ್ತು ಭೂ ವಿಜ್ಞಾನ ಇಲಾಖೆ, ಬೆಂಗಳೂರು.

**ನಿರ್ದೇಶಕರು, ಗಣಿ ಮತ್ತು ಭೂ ವಿಜ್ಞಾನ ಇಲಾಖೆ, ಬೆಂಗಳೂರು ಇವರ ನಡವಳಿಗಳು**

**ಸಂಖ್ಯೆ: ಗಭೂಇ:ಗಗುಶಾ:982 ಎಎಂಎಲ್07:10–11/2578, ದಿನಾಂಕ:15ನೇ ಜೂನ್, 2010**

**ವಿಷಯ:** ಮೆ: ಸೌತ್‌ವೆಸ್ಟ್ ಮೈನಿಂಗ್ ಲಿ., ರವರು ದಿನಾಂಕ:18.07.2007ರಂದು ಬಳ್ಳಾರಿ ಜಿಲ್ಲೆ, ಸಂಡೂರು ತಾಲ್ಲೂಕು, ಸುಲ್ತಾನಪುರ ಗ್ರಾಮದ 426–786 ಹೆಕ್ಟೇರ್ ಪ್ರದೇಶದಲ್ಲಿ ಕಬ್ಬಿಣದ ಅದಿರು ಖನಿಜಕ್ಕಾಗಿ ಸಲ್ಲಿಸಿರುವ ಗಣಿಗುತ್ತಿಗೆ ಅರ್ಜಿ ಬಗ್ಗೆ.

**ಉಲ್ಲೇಖ:** 1. ಈ ಕಛೇರಿ ನೋಟೀಸ್ ಸಂಖ್ಯೆ:982 ಎಎಂಎಲ್ 07:17776–77, ದಿನಾಂಕ:12.03.2010.

2. ಅರ್ಜಿದಾರರ ವಿವರಣೆ ದಿ:27–04–2010.

**ಪ್ರಸ್ತಾವನೆ:**

ಮೆ: ಸೌತ್‌ವೆಸ್ಟ್ ಮೈನಿಂಗ್ ಲಿ., ರವರು ಬಳ್ಳಾರಿ ಜಿಲ್ಲೆ, ಸಂಡೂರು ತಾಲ್ಲೂಕು, ಸುಲ್ತಾನಪುರ ಗ್ರಾಮದ 426–786 ಹೆಕ್ಟೇರ್ ಪ್ರದೇಶದಲ್ಲಿಕಬ್ಬಿಣದ ಅದಿರು ಖನಿಜಕ್ಕಾಗಿ ಕೋರಿ ಸಲ್ಲಿಸಿರುವ ಗಣಿಗುತ್ತಿಗೆ ಅರ್ಜಿ ಸಂಖ್ಯೆ:982 ಎಎಂಎಲ್ 07ನ್ನು ಪರಿಶೀಲಿಸಿದೆ.

ಅರ್ಜಿದಾರರು ಗಣಿಗುತ್ತಿಗೆಗಾಗಿ ಕೋರಿರುವ ಪ್ರದೇಶವು ಪೂರ್ವ ಗಣಿ ಗುತ್ತಿಗೆ ಅನ್ವೇಷಣಾ ಲೈಸೆನ್ಸ್ ಸಂಖ್ಯೆ:3362ರ ಪ್ರದೇಶದ ಮೇಲೆ ಅತಿವ್ಯಾಪ್ತಿಯಾಗುತ್ತಿದ್ದು, ಈ ಬಗ್ಗೆ ಉಲ್ಲೇಖ (1)ರ ಈ ಕಛೇರಿ ನೋಟೀಸ್‌ಗೆ ಅರ್ಜಿದಾರರು ಉಲ್ಲೇಖ (2)ರಲ್ಲಿ ನೀಡಿರುವ ಉತ್ತರವನ್ನು ಪರಿಗಣಿಸಲು ಅಪೇಕ್ಷಿತ ಪ್ರದೇಶವು ಪೂರ್ಣ ಪ್ರಮಾಣದಲ್ಲಿ ಅತಿವ್ಯಾಪ್ತಿಯಾಗುತ್ತಿದ್ದು, ಸ್ಥಳದ ಲಭ್ಯತೆ ಇಲ್ಲದೇ ಇರುವ ಹಿನ್ನೆಲೆಯಲ್ಲಿ ಈ ಕೆಳಕಂಡ ಆದೇಶ.

**ಆದೇಶ**

ಸರ್ಕಾರದ ಆದೇಶ ಸಂಖ್ಯೆ: ಸಿಐ 03 ಎಂಎಂಎಂ 95 ದಿನಾಂಕ:27–05–1995 ಮತ್ತು ಸಿಐ 214 ಎಂಎಂಎಂ 2006 ದಿನಾಂಕ:09–02–2007ರನ್ವಯ ನಿರ್ದೇಶಕರು, ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ ಇವರಿಗೆ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಗಣಿಗುತ್ತಿಗೆ ಅರ್ಜಿ ಸಂಖ್ಯೆ 982 ಎಎಂಎಲ್ 07ನ್ನು ಮೇಲೆ ವಿವರಿಸಿದ ಕಾರಣಗಳಿಗಾಗಿ ತಿರಸ್ಕರಿಸಲಾಗಿದೆ.

ನಿರ್ದೇಶಕರು

ಗಣಿ ಮತ್ತು ಭೂ ವಿಜ್ಞಾನ ಇಲಾಖೆ, ಬೆಂಗಳೂರು.

**ನಿರ್ದೇಶಕರು, ಗಣಿ ಮತ್ತು ಭೂ ವಿಜ್ಞಾನ ಇಲಾಖೆ, ಬೆಂಗಳೂರು ಇವರ ನಡವಳಿಗಳು**

**ಸಂಖ್ಯೆ: ಗಭೂಇ:ಗಗುಶಾ:188 ಎಎಂಎಲ್2005: 10–11/2580, ದಿನಾಂಕ:15ನೇ ಜೂನ್, 2010**

**ವಿಷಯ:** ಶ್ರೀ ಹೆಚ್.ಎಂ.ಬಕ್ಕಪ್ಪಯ್ಯ ರವರು ದಿ:14–02–2005ರಂದು ಬಳ್ಳಾರಿ ಜಿಲ್ಲೆ, ಸಂಡೂರು ತಾಲ್ಲೂಕು, ರಾಮಘಡ ರೇಂಜ್ ಗ್ರಾಮದ 72.00 ಎಕರೆ ಪ್ರದೇಶದಲ್ಲಿ ಕಬ್ಬಿಣದ ಅದಿರು ಖನಿಜಕ್ಕಾಗಿ ಸಲ್ಲಿಸಿರುವ ಗಣಿಗುತ್ತಿಗೆ ಅರ್ಜಿ ಬಗ್ಗೆ.

**ಉಲ್ಲೇಖ:** 1. ಈ ಕಛೇರಿ ನೋಟೀಸ್ ಸಂಖ್ಯೆ:188 ಎಎಂಎಲ್ 2005:6042–43 ದಿನಾಂಕ:31–03–2010.

2. ಅರ್ಜಿದಾರರ ವಿವರಣೆ ದಿ:15–04–2010.

**ಪ್ರಸ್ತಾವನೆ:**

ಶ್ರೀ ಹೆಚ್.ಎಂ.ಬಕ್ಕಪ್ಪಯ್ಯ ರವರು ಬಳ್ಳಾರಿ ಜಿಲ್ಲೆ ಸಂಡೂರು ತಾಲ್ಲೂಕು, ದೇವಗಿರಿ ಗ್ರಾಮದ 72.00 ಎಕರೆ ಪ್ರದೇಶದಲ್ಲಿಕಬ್ಬಿಣದ ಅದಿರು ಖನಿಜಕ್ಕಾಗಿ ಕೋರಿ ಸಲ್ಲಿಸಿರುವ ಗಣಿ ಗುತ್ತಿಗೆ ಅರ್ಜಿ ಸಂಖ್ಯೆ: 188 ಎಎಂಎಲ್ 2005ನ್ನು ಪರಿಶೀಲಿಸಿದೆ.

ಅರ್ಜಿದಾರರು ಗಣಿಗುತ್ತಿಗೆಗಾಗಿ ಕೋರಿರುವ ಪ್ರದೇಶವು ಮೆ:ಸ್ಮಯೋರ್ ರವರ ಗುತ್ತಿಗೆ ಪ್ರದೇಶದ ಮೇಲೆ ಅತಿವ್ಯಾಪ್ತಿಯಾಗುತ್ತಿದ್ದು, ಈ ಬಗ್ಗೆ ಉಲ್ಲೇಖ (1)ರ ಈ ಕಛೇರಿ ನೋಟೀಸ್‌ಗೆ ಅರ್ಜಿದಾರರು ಉಲ್ಲೇಖ (2)ರಲ್ಲಿ ನೀಡಿರುವ ವಿವರಣೆಯಲ್ಲಿ ಅದ್ಯರ್ಪಿತ ಪ್ರದೇಶವೆಂದು ತಿಳಿಸಿ ಪರಿಗಣಿಸಲು ಕೋರಿದ್ದಾರೆ. ಅರ್ಜಿದಾರರ ಹೇಳಿಕೆಯಂತೆ ಅದ್ಯರ್ಪಿತ ಪ್ರದೇಶವೆಂದು ತಿಳಿಸಿ ಪರಿಗಣಿಸಿದರೂ ಸಹ MCR ನಿಯಮ 59(1)ನ್ನು ಆಕರ್ಷಿಸುವುದರಿಂದ ಅರ್ಜಿದಾರರ ಪ್ರಸಕ್ತ ಅರ್ಜಿಯನ್ನು ಪರಿಗಣಿಸಲಾಗುವುದಿಲ್ಲ. ಈ ಹಿನ್ನೆಲೆಯಲ್ಲಿ ಕೆಳಕಂಡ ಆದೇಶ.

**ಆದೇಶ**

ಸರ್ಕಾರದ ಆದೇಶ ಸಂಖ್ಯೆ: ಸಿಐ 03 ಎಂಎಂಎಂ 95 ದಿನಾಂಕ:27–05–1995 ಮತ್ತು ಸಿಐ 214 ಎಂಎಂಎಂ 2006 ದಿನಾಂಕ:09–02–2007ರನ್ವಯ ನಿರ್ದೇಶಕರು, ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ ಇವರಿಗೆ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಗಣಿಗುತ್ತಿಗೆ ಅರ್ಜಿ ಸಂಖ್ಯೆ 188 ಎಎಂಎಲ್ 2005 ನ್ನು ಮೇಲೆ ವಿವರಿಸಿದ ಕಾರಣಗಳಿಗಾಗಿ ತಿರಸ್ಕರಿಸಲಾಗಿದೆ.

ನಿರ್ದೇಶಕರು
ಗಣಿ ಮತ್ತು ಭೂ ವಿಜ್ಞಾನ ಇಲಾಖೆ, ಬೆಂಗಳೂರು.

**ನಿರ್ದೇಶಕರು, ಗಣಿ ಮತ್ತು ಭೂ ವಿಜ್ಞಾನ ಇಲಾಖೆ, ಬೆಂಗಳೂರು ಇವರ ನಡವಳಿಗಳು**

**ಸಂಖ್ಯೆ: ಗಭೂಇ:ಗಗುಶಾ:66 ಎಎಂಎಲ್2005: 10–11/2582, ದಿನಾಂಕ:15ನೇ ಜೂನ್, 2010**

**ವಿಷಯ:** ಶ್ರೀ ಹೆಚ್.ಎಂ.ಕುಮಾರಸ್ವಾಮಿ ರವರು ದಿನಾಂಕ:06.01.2005ರಂದು ಬಳ್ಳಾರಿ ಜಿಲ್ಲೆ, ಸಂಡೂರು ತಾಲ್ಲೂಕು, ಸ್ವಾಮಿಮಲೈರೇಂಜ್ ಗ್ರಾಮದ 180.00 ಎಕರೆ ಪ್ರದೇಶದಲ್ಲಿ ಕಬ್ಬಿಣದ ಅದಿರು ಖನಿಜಕ್ಕಾಗಿ ಸಲ್ಲಿಸಿರುವ ಗಣಿಗುತ್ತಿಗೆ ಅರ್ಜಿ ಬಗ್ಗೆ.

**ಉಲ್ಲೇಖ:** 1. ಈ ಕಛೇರಿ ನೋಟೀಸ್ ಸಂಖ್ಯೆ:66 ಎಎಂಎಲ್ 2005:6681, ದಿನಾಂಕ:22–08–2007.

2. ಅರ್ಜಿದಾರರ ವಿವರಣೆ ದಿ:17–09–2007.

**ಪ್ರಸ್ತಾವನೆ:**

ಶ್ರೀ ಹೆಚ್.ಎಂ.ಕುಮಾರಸ್ವಾಮಿ ರವರು ಬಳ್ಳಾರಿ ಜಿಲ್ಲೆ, ಸಂಡೂರು ತಾಲ್ಲೂಕು, ಸ್ವಾಮಿಮಲೈರೇಂಜ್ ಗ್ರಾಮದ 180.00 ಎಕರೆ ಪ್ರದೇಶದಲ್ಲಿ ಕಬ್ಬಿಣದ ಅದಿರು ಖನಿಜಕ್ಕಾಗಿ ಸಲ್ಲಿಸಿರುವ ಗಣಿಗುತ್ತಿಗೆ ಅರ್ಜಿ ಸಂಖ್ಯೆ:66 ಎಎಂಎಲ್ 2005ನ್ನು ಪರಿಶೀಲಿಸಿದೆ.

ಅರ್ಜಿದಾರರು ಗಣಿಗುತ್ತಿಗೆಗಾಗಿ ಕೋರಿರುವ ಪ್ರದೇಶವು ಪೂರ್ವ ಅರ್ಜಿಗಳಾದ 16 ಎಎಂಎಲ್ 94, 127 ಎಎಂಎಲ್ 80, 337 ಎಎಂಎಲ್ 95 ಮೆ: ಎಂಎಂಎಲ್ ನ ಗ.ಗು.ಸಂ.2629 ಪ್ರದೇಶದ ಮೇಲೆ ಪೂರ್ಣ ಪ್ರಮಾಣದಲ್ಲಿ ಅತಿವ್ಯಾಪ್ತಿಯಾಗುತ್ತಿದ್ದು, ಈ ಬಗ್ಗೆ ಉಲ್ಲೇಖ (1)ರ ಈ ಕಛೇರಿ ನೋಟೀಸ್‌ಗೆ ಅರ್ಜಿದಾರರು ಉಲ್ಲೇಖ (2)ರಲ್ಲಿ ನೀಡಿರುವ ವಿವರಣೆಯ ನೀಡುತ್ತಾ, ಮುಕ್ತ ಪ್ರದೇಶಕ್ಕೆ ತಮ್ಮ ಅರ್ಜಿಯನ್ನು ಪರಿಗಣಿಸಲು ಕೋರಿರುತ್ತಾರೆ. ಮತ್ತೊಮ್ಮೆ ಪರಿಶೀಲಿಸಲಾಗಿ

ಅಪೇಕ್ಷಿತ ಪ್ರದೇಶವು ಪೂರ್ಣ ಪ್ರಮಾಣದಲ್ಲಿ ಅತಿವ್ಯಾಪ್ತಿಯಾಗುತ್ತಿರುವುದರಿಂದ ಸ್ಥಳದ ಲಭ್ಯತೆ ಇಲ್ಲದೇ ಇರುವ ಹಿನ್ನೆಲೆಯಲ್ಲಿ ಕೆಳಕಂಡ ಆದೇಶ.

**ಆದೇಶ**

ಸರ್ಕಾರದ ಆದೇಶ ಸಂಖ್ಯೆ: ಸಿಐ 03 ಎಂಎಂಎಂ 95 ದಿನಾಂಕ:27–05–1995 ಮತ್ತು ಸಿಐ 214 ಎಂಎಂಎಂ 2006 ದಿನಾಂಕ:09–02–2007ರನ್ವಯ ನಿರ್ದೇಶಕರು, ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ ಇವರಿಗೆ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಗಣಿಗುತ್ತಿಗೆ ಅರ್ಜಿ ಸಂಖ್ಯೆ 66 ಎಎಂಎಲ್ 2005 ನ್ನು ಮೇಲೆ ವಿವರಿಸಿದ ಕಾರಣಗಳಿಗಾಗಿ ತಿರಸ್ಕರಿಸಲಾಗಿದೆ.

ನಿರ್ದೇಶಕರು
ಗಣಿ ಮತ್ತು ಭೂ ವಿಜ್ಞಾನ ಇಲಾಖೆ, ಬೆಂಗಳೂರು.

**ನಿರ್ದೇಶಕರು, ಗಣಿ ಮತ್ತು ಭೂ ವಿಜ್ಞಾನ ಇಲಾಖೆ, ಬೆಂಗಳೂರು ಇವರ ನಡವಳಿಗಳು**

**ಸಂಖ್ಯೆ: ಗಭೂಇ:ಗಗುಶಾ:267 ಎಎಂಎಲ್10:10–11/2584, ದಿನಾಂಕ:15ನೇ ಜೂನ್, 2010**

**ವಿಷಯ:** ಶ್ರೀ ಕೆ.ಸಿ.ಸತ್ಯನಾರಾಯಣ ರೆಡ್ಡಿ ರವರು ದಿನಾಂಕ: 02.03.2010 ರಂದು ಬಳ್ಳಾರಿ ಜಿಲ್ಲೆ, ಸಂಡೂರು ತಾಲ್ಲೂಕು, NEB ರೇಂಜ್ ನ 24.2 ಹೆಕ್ಟೇರ್ ಪ್ರದೇಶದಲ್ಲಿ ಕಬ್ಬಿಣದ ಅದಿರು ಮತ್ತು ರೆಡ್ ಆಕ್ಸೈಡ್ ಖನಿಜಕ್ಕಾಗಿ ಸಲ್ಲಿಸಿರುವ ಗಣಿಗುತ್ತಿಗೆ ಅರ್ಜಿ ಬಗ್ಗೆ.

**ಉಲ್ಲೇಖ:** 1. ಈ ಕಛೇರಿ ನೋಟೀಸ್ ಸಂಖ್ಯೆ: DMG: 267 AML 10:561-62 ದಿನಾಂಕ:03–05–2010.
2 ಅರ್ಜಿದಾರರ ವಿವರಣೆ ದಿ:21–05–2010.

**ಪ್ರಸ್ತಾವನೆ:**

ಶ್ರೀ ಕೆ.ಸಿ.ಸತ್ಯನಾರಾಯಣ ರೆಡ್ಡಿ ಇವರು ಬಳ್ಳಾರಿ ಜಿಲ್ಲೆ ಸಂಡೂರು ತಾಲ್ಲೂಕು, NEB ರೇಂಜ್ ನ 24.20 ಹೆಕ್ಟೇರ್ ಪ್ರದೇಶದಲ್ಲಿಕಬ್ಬಿಣದ ಅದಿರು ಮತ್ತು ರೆಡ್ ಆಕ್ಸೈಡ್ ಖನಿಜಕ್ಕಾಗಿ ಕೋರಿ ಸಲ್ಲಿಸಿರುವ ಗಣಿಗುತ್ತಿಗೆ ಅರ್ಜಿ ಸಂಖ್ಯೆ:267 ಎಎಂಎಲ್ 2010ನ್ನು ಪರಿಶೀಲಿಸಿದೆ.

ಅರ್ಜಿದಾರರು ಗಣಿಗುತ್ತಿಗೆಗಾಗಿ ಕೋರಿರುವ ಪ್ರದೇಶವು 13 ಪೂರ್ವ ಅರ್ಜಿಗಳ ಮೇಲೆ ಅತಿವ್ಯಾಪ್ತಿ ಯಾಗುತ್ತಿದ್ದು, ಅರ್ಜಿದಾರರು ಉಲ್ಲೇಖಿತ (2)ರ ಪತ್ರದಲ್ಲಿ ನೀಡಿರುವ ವಿವರಣೆಯಲ್ಲಿ 15 ದಿನಗಳೊಳಗೆ ಪರಿಷ್ಕೃತ ನಕ್ಷೆಯನ್ನು ಸಲ್ಲಿಸುವುದಾಗಿ ತಿಳಿಸಿರುತ್ತಾರೆ. ಪರಿಷ್ಕೃತ ನಕ್ಷೆಯನ್ನು ಸಲ್ಲಿಸಿದರೂ ಸಹ, ಅದು ಅಪೇಕ್ಷಿತ ಪ್ರದೇಶದೊಳಗಡೆಯೇ ಇರಬೇಕಾದ ಪ್ರಯುಕ್ತ, ಸದರಿ ಪ್ರದೇಶವನ್ನು ಪರಿಗಣಿಸಲು ಸ್ಥಳದ ಲಭ್ಯತೆ ಇಲ್ಲದೇ ಇರುವ ಹಿನ್ನೆಲೆಯಲ್ಲಿ ಕೆಳಕಂಡ ಆದೇಶ

**ಆದೇಶ**

ಸರ್ಕಾರದ ಆದೇಶ ಸಂಖ್ಯೆ: ಸಿಐ 03 ಎಂಎಂಎಂ 95 ದಿನಾಂಕ:27–05–1995 ಮತ್ತು ಸಿಐ 214 ಎಂಎಂಎಂ 2006 ದಿನಾಂಕ:09–02–2007ರನ್ವಯ ನಿರ್ದೇಶಕರು, ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ ಇವರಿಗೆ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಗಣಿಗುತ್ತಿಗೆ ಅರ್ಜಿ ಸಂಖ್ಯೆ 267 ಎಎಂಎಲ್ 2010ನ್ನು ಮೇಲೆ ವಿವರಿಸಿದ ಕಾರಣಗಳಿಗಾಗಿ ತಿರಸ್ಕರಿಸಲಾಗಿದೆ.

ನಿರ್ದೇಶಕರು
ಪಿ.ಆರ್.1011 ಗಣಿ ಮತ್ತು ಭೂ ವಿಜ್ಞಾನ ಇಲಾಖೆ, ಬೆಂಗಳೂರು.

**ನಿರ್ದೇಶಕರು, ಗಣಿ ಮತ್ತು ಭೂ ವಿಜ್ಞಾನ ಇಲಾಖೆ, ಬೆಂಗಳೂರು ಇವರ ನಡವಳಿಗಳು**

**ಸಂಖ್ಯೆ: ಗಭೂಇ:ಗಗುಶಾ:586 ಎಎಂಎಲ್2005: 10–11/2570, ದಿನಾಂಕ:15ನೇ ಜೂನ್, 2010**

**ವಿಷಯ:** M/s. Roopa Enterprises ರವರು ದಿ:29–04–2005ರಂದು ಬಳ್ಳಾರಿ ಜಿಲ್ಲೆ, ಸಂಡೂರು ತಾಲ್ಲೂಕು, ದೇವಗಿರಿ ಗ್ರಾಮದ 12.00 ಎಕರೆ ಪ್ರದೇಶದಲ್ಲಿ ಕಬ್ಬಿಣದ ಅದಿರು & ಮ್ಯಾಂಗನೀಸ್ ಖನಿಜಕ್ಕಾಗಿ ಸಲ್ಲಿಸಿರುವ ಗಣಿಗುತ್ತಿಗೆ ಅರ್ಜಿ ಬಗ್ಗೆ.

**ಉಲ್ಲೇಖ:**1. ಈ ಕಛೇರಿ ನೋಟೀಸ್ ಸಂಖ್ಯೆ:586 ಎಎಂಎಲ್ 2005:5938 ದಿನಾಂಕ:31–03–2010.
2. ಅರ್ಜಿದಾರರ ವಿವರಣೆ ದಿ:07–04–2010.

**ಪ್ರಸ್ತಾವನೆ:**

M/s. Roopa Enterprises ರವರು ಬಳ್ಳಾರಿ ಜಿಲ್ಲೆ ಸಂಡೂರು ತಾಲ್ಲೂಕು, ದೇವಗಿರಿ ಗ್ರಾಮದ 12.00 ಎಕರೆ ಪ್ರದೇಶದಲ್ಲಿಕಬ್ಬಿಣದ ಅದಿರು ಖನಿಜಕ್ಕಾಗಿ ಕೋರಿ ಸಲ್ಲಿಸಿರುವ ಗಣಿ ಗುತ್ತಿಗೆ ಅರ್ಜಿ ಸಂಖ್ಯೆ: 586 ಎಎಂಎಲ್ 2005ನ್ನು ಪರಿಶೀಲಿಸಿದೆ.

ಅರ್ಜಿದಾರರು ಗಣಿಗುತ್ತಿಗೆಗಾಗಿ ಕೋರಿರುವ ಪ್ರದೇಶವು ಮೆ:ಸ್ಮಯೋರ್ ರವರ ಗುತ್ತಿಗೆ ಪ್ರದೇಶದ ಮೇಲೆ ಅತಿವ್ಯಾಪ್ತಿಯಾಗುತ್ತಿದ್ದು, ಈ ಬಗ್ಗೆ ಉಲ್ಲೇಖ (1)ರ ಈ ಕಛೇರಿ ನೋಟೀಸ್‌ಗೆ ಅರ್ಜಿದಾರರು ಉಲ್ಲೇಖ (2)ರಲ್ಲಿ ನೀಡಿರುವ ವಿವರಣೆಯಲ್ಲಿ ಮೆ:ಸ್ಮಯೋರ್ ಕಂಪನಿಯ ಅಧಿಕಾರಿಗಳಿಂದ ಮುಕ್ತತೆಯನ್ನು ಖಚಿತಪಡಿಸಿ ಕೊಂಡಿರುವುದಾಗಿ ತಿಳಿಸಿದ್ದಾರೆ. ಮತ್ತೊಮ್ಮೆ ಪರಿಶೀಲಿಸಲಾಗಿ ಅಪೇಕ್ಷಿತ ಪ್ರದೇಶವು ಪೂರ್ಣ ಪ್ರಮಾಣದಲ್ಲಿ ಅತಿವ್ಯಾಪ್ತಿಯಾಗುತ್ತಿರುವುದರಿಂದ ಸ್ಥಳದ ಲಭ್ಯತೆ ಇಲ್ಲದೇ ಇರುವ ಹಿನ್ನೆಲೆಯಲ್ಲಿ ಕೆಳಕಂಡ ಆದೇಶ.

**ಆದೇಶ**

ಸರ್ಕಾರದ ಆದೇಶ ಸಂಖ್ಯೆ: ಸಿಐ 03 ಎಂಎಂಎಂ 95 ದಿನಾಂಕ:27–05–1995 ಮತ್ತು ಸಿಐ 214 ಎಂಎಂಎಂ 2006 ದಿನಾಂಕ:09–02–2007ರನ್ವಯ ನಿರ್ದೇಶಕರು, ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ ಇವರಿಗೆ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಗಣಿಗುತ್ತಿಗೆ ಅರ್ಜಿ ಸಂಖ್ಯೆ 586 ಎಎಂಎಲ್ 2005 ನ್ನು ಮೇಲೆ ವಿವರಿಸಿದ ಕಾರಣಗಳಿಗಾಗಿ ತಿರಸ್ಕರಿಸಲಾಗಿದೆ.

ನಿರ್ದೇಶಕರು
ಗಣಿ ಮತ್ತು ಭೂ ವಿಜ್ಞಾನ ಇಲಾಖೆ, ಬೆಂಗಳೂರು.

**ನಿರ್ದೇಶಕರು, ಗಣಿ ಮತ್ತು ಭೂ ವಿಜ್ಞಾನ ಇಲಾಖೆ, ಬೆಂಗಳೂರು ಇವರ ನಡವಳಿಗಳು**

**ಸಂಖ್ಯೆ: ಗಭೂಇ:ಗಗುಶಾ:1067 ಎಎಂಎಲ್2005: 10–11/2572, ದಿನಾಂಕ:15ನೇ ಜೂನ್, 2010**

**ವಿಷಯ:** ಮೆ: ಸನಾ ಮಿನರಲ್ಸ್ ರವರು ದಿ:06–11–2006ರಂದು ಬಳ್ಳಾರಿ ಜಿಲ್ಲೆ, ಸಂಡೂರು ತಾಲ್ಲೂಕು, ಜೈಸಿಂಗಪುರ ಗ್ರಾಮದ 101.00 ಹೆಕ್ಟೇರ್ ಪ್ರದೇಶದಲ್ಲಿ ಕಬ್ಬಿಣದ ಅದಿರು ಖನಿಜಕ್ಕಾಗಿ ಸಲ್ಲಿಸಿರುವ ಗಣಿಗುತ್ತಿಗೆ ಅರ್ಜಿ ಬಗ್ಗೆ.

**ಉಲ್ಲೇಖ:** 1. ಈ ಕಛೇರಿ ನೋಟೀಸ್ ಸಂಖ್ಯೆ: 1067 ಎಎಂಎಲ್ 2005:5683–84, ದಿನಾಂಕ:25–03–2010.
2. ಅರ್ಜಿದಾರರ ವಿವರಣೆ ದಿ:15–04–2010.

**ಪ್ರಸ್ತಾವನೆ:**

ಮೆ: ಸನಾ ಮಿನರಲ್ಸ್ ರವರು ಬಳ್ಳಾರಿ ಜಿಲ್ಲೆ ಸಂಡೂರು ತಾಲ್ಲೂಕು, ಜೈಸಿಂಗಪುರ ಗ್ರಾಮದ 101.00 ಹೆಕ್ಟೇರ್ ಪ್ರದೇಶದಲ್ಲಿಕಬ್ಬಿಣದ ಅದಿರು ಖನಿಜಕ್ಕಾಗಿ ಕೋರಿ ಸಲ್ಲಿಸಿರುವ ಗಣಿ ಗುತ್ತಿಗೆ ಅರ್ಜಿ ಸಂಖ್ಯೆ:1067 ಎಎಂಎಲ್ 2005 ನ್ನು ಪರಿಶೀಲಿಸಿದೆ.

ಅರ್ಜಿದಾರರು ಗಣಿಗುತ್ತಿಗೆಗಾಗಿ ಕೋರಿರುವ ಪ್ರದೇಶವು ಇತರೆ ಪೂರ್ವ ಅರ್ಜಿಗಳಾದ 958 AML 05, 148 AML 04, 143 AML 06, 712 AML 06 ಗಳ ಪ್ರದೇಶದ ಮೇಲೆ ಪೂರ್ಣ ಪ್ರಮಾಣದಲ್ಲಿ ಅತಿವ್ಯಾಪ್ತಿಯಾಗುತ್ತಿದ್ದು, ಈ ಬಗ್ಗೆ ಉಲ್ಲೇಖ (1)ರ ಈ ಕಛೇರಿ ನೋಟೀಸ್‌ಗೆ ಅರ್ಜಿದಾರರು ಉಲ್ಲೇಖ (2)ರಲ್ಲಿ ನೀಡಿರುವ ವಿವರಣೆಯನ್ನು ಒಪ್ಪಿಕೊಳ್ಳಲು, ಪೂರ್ಣ ಪ್ರಮಾಣದಲ್ಲಿ ಅತಿವ್ಯಾಪ್ತಿಯಾಗುತ್ತಿರುವುದರಿಂದ ಸ್ಥಳದ ಲಭ್ಯತೆ ಇಲ್ಲದೇ ಇರುವ ಹಿನ್ನೆಲೆಯಲ್ಲಿ ಕೆಳಕಂಡ ಆದೇಶ.

**ಆದೇಶ**

ಸರ್ಕಾರದ ಆದೇಶ ಸಂಖ್ಯೆ: ಸಿಐ 03 ಎಂಎಂಎಂ 95 ದಿನಾಂಕ:27–05–1995 ಮತ್ತು ಸಿಐ 214 ಎಂಎಂಎಂ 2006 ದಿನಾಂಕ:09–02–2007ರನ್ವಯ ನಿರ್ದೇಶಕರು, ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ ಇವರಿಗೆ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಗಣಿಗುತ್ತಿಗೆ ಅರ್ಜಿ ಸಂಖ್ಯೆ 1067 ಎಎಂಎಲ್ 2005 ನ್ನು ಮೇಲೆ ವಿವರಿಸಿದ ಕಾರಣಗಳಿಗಾಗಿ ತಿರಸ್ಕರಿಸಲಾಗಿದೆ.

ನಿರ್ದೇಶಕರು
ಗಣಿ ಮತ್ತು ಭೂ ವಿಜ್ಞಾನ ಇಲಾಖೆ, ಬೆಂಗಳೂರು.

**ನಿರ್ದೇಶಕರು, ಗಣಿ ಮತ್ತು ಭೂ ವಿಜ್ಞಾನ ಇಲಾಖೆ, ಬೆಂಗಳೂರು ಇವರ ನಡವಳಿಗಳು**

**ಸಂಖ್ಯೆ: ಗಭೂಇ:ಗಗುಶಾ:261 ಎಎಂಎಲ್10:10–11/2574, ದಿನಾಂಕ:15ನೇ ಜೂನ್, 2010**

**ವಿಷಯ:** ಮೆ:ಜಿ.ಎಸ್. ಮಿನರಲ್ಸ್ ರವರು ದಿನಾಂಕ: 25.02.2010 ರಂದು ಬಳ್ಳಾರಿ ಜಿಲ್ಲೆ, ಸಂಡೂರು ತಾಲ್ಲೂಕು, NEB ರೇಂಜ್ ನ 175.00 ಎಕರೆ ಪ್ರದೇಶದಲ್ಲಿ ಕಬ್ಬಿಣದ ಅದಿರು ಮತ್ತು ರೆಡ್ ಆಕ್ಸೈಡ್ ಖನಿಜಕ್ಕಾಗಿ ಸಲ್ಲಿಸಿರುವ ಗಣಿಗುತ್ತಿಗೆ ಅರ್ಜಿ ಬಗ್ಗೆ.

**ಉಲ್ಲೇಖ:**1. ಈ ಕಛೇರಿ ನೋಟೀಸ್ ಸಂಖ್ಯೆ: DMG: 261 AML 10:559-60 ದಿನಾಂಕ:03–05–2010.

2 ಅರ್ಜಿದಾರರ ವಿವರಣೆ ದಿ:21–05–2010.

**ಪ್ರಸ್ತಾವನೆ:**

ಮೆ:ಜಿ.ಎಸ್. ಮಿನರಲ್ಸ್ ಇವರು ಬಳ್ಳಾರಿ ಜಿಲ್ಲೆ ಸಂಡೂರು ತಾಲ್ಲೂಕು, NEB ರೇಂಜ್ ನ 175.00 ಎಕರೆ ಪ್ರದೇಶದಲ್ಲಿಕಬ್ಬಿಣದ ಅದಿರು ಮತ್ತು ರೆಡ್ ಆಕ್ಸೈಡ್ ಖನಿಜಕ್ಕಾಗಿ ಕೋರಿ ಸಲ್ಲಿಸಿರುವ ಗಣಿಗುತ್ತಿಗೆ ಅರ್ಜಿ ಸಂಖ್ಯೆ:261 ಎಎಂಎಲ್ 2010ನ್ನು ಪರಿಶೀಲಿಸಿದೆ.

ಅರ್ಜಿದಾರರು ಗಣಿಗುತ್ತಿಗೆಗಾಗಿ ಕೋರಿರುವ ಪ್ರದೇಶವು 15 ಪೂರ್ವ ಅರ್ಜಿಗಳ ಪ್ರದೇಶಕ್ಕೆ ಅತಿವ್ಯಾಪ್ತಿ ಯಾಗುತ್ತಿದ್ದು, ಅರ್ಜಿದಾರರು ಉಲ್ಲೇಖಿತ (2)ರ ಪತ್ರದಲ್ಲಿ ನೀಡಿರುವ ವಿವರಣೆಯಲ್ಲಿ 15 ದಿನಗಳೊಳಗೆ ಪರಿಷ್ಕೃತ ನಕ್ಷೆಯನ್ನು ಸಲ್ಲಿಸುವುದಾಗಿ ತಿಳಿಸಿರುತ್ತಾರೆ. ಪರಿಷ್ಕೃತ ನಕ್ಷೆಯನ್ನು ಸಲ್ಲಿಸಿದರೂ ಸಹ, ಅದು ಅಪೇಕ್ಷಿತ ಪ್ರದೇಶದೊಳಗಡೆಯೇ ಇರಬೇಕಾದ ಪ್ರಯುಕ್ತ, ಸದರಿ ಪ್ರದೇಶವನ್ನು ಪರಿಗಣಿಸಲು ಸ್ಥಳದ ಲಭ್ಯತೆ ಇಲ್ಲದೇ ಇರುವ ಹಿನ್ನೆಲೆಯಲ್ಲಿ ಕೆಳಕಂಡ ಆದೇಶ.

**ಆದೇಶ**

ಸರ್ಕಾರದ ಆದೇಶ ಸಂಖ್ಯೆ: ಸಿಐ 03 ಎಂಎಂಎಂ 95 ದಿನಾಂಕ:27–05–1995 ಮತ್ತು ಸಿಐ 214 ಎಂಎಂಎಂ 2006 ದಿನಾಂಕ:09–02–2007ರನ್ವಯ ನಿರ್ದೇಶಕರು, ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ ಇವರಿಗೆ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಗಣಿಗುತ್ತಿಗೆ ಅರ್ಜಿ ಸಂಖ್ಯೆ 261 ಎಎಂಎಲ್ 2010ನ್ನು ಮೇಲೆ ವಿವರಿಸಿದ ಕಾರಣಗಳಿಗಾಗಿ ತಿರಸ್ಕರಿಸಲಾಗಿದೆ.

ನಿರ್ದೇಶಕರು

ಗಣಿ ಮತ್ತು ಭೂ ವಿಜ್ಞಾನ ಇಲಾಖೆ, ಬೆಂಗಳೂರು.

**ನಿರ್ದೇಶಕರು, ಗಣಿ ಮತ್ತು ಭೂ ವಿಜ್ಞಾನ ಇಲಾಖೆ, ಬೆಂಗಳೂರು ಇವರ ನಡವಳಿಗಳು**

**ಸಂಖ್ಯೆ: ಗಭೂಇ:ಗಗುಶಾ:1102 ಎಎಂಎಲ್2006: 10–11/2576, ದಿನಾಂಕ:15ನೇ ಜೂನ್, 2010**

**ವಿಷಯ:** M/s. Parwaz Sponze Iron Pvt.Ltd., ರವರು ದಿನಾಂಕ:20–11–2006 ರಂದು ಬಳ್ಳಾರಿ ಜಿಲ್ಲೆ, ಸಂಡೂರು ತಾಲ್ಲೂಕು, ಇಂಗಳಗಿ ಗ್ರಾಮದ 244–00 ಎಕರೆ ಪ್ರದೇಶದಲ್ಲಿ ಕಬ್ಬಿಣದ ಅದಿರು ಖನಿಜಕ್ಕಾಗಿ ಸಲ್ಲಿಸಿರುವ ಗಣಿಗುತ್ತಿಗೆ ಅರ್ಜಿ ಬಗ್ಗೆ.

**ಉಲ್ಲೇಖ:** 1. ಈ ಕಛೇರಿ ನೋಟೀಸ್ ಸಂಖ್ಯೆ:1102 ಎಎಂಎಲ್ 2006:5728–29 ದಿನಾಂಕ:25–03–2010.

2. ಅರ್ಜಿದಾರರ ವಿವರಣೆ ದಿ:15–04–2010.

**ಪ್ರಸ್ತಾವನೆ:**

M/s. Parwaz Sponze Iron Pvt.Ltd., ರವರು ಬಳ್ಳಾರಿ ಜಿಲ್ಲೆ ಸಂಡೂರು ತಾಲ್ಲೂಕು, ಇಂಗಳಗಿ ಗ್ರಾಮದ 244–00 ಎಕರೆ ಪ್ರದೇಶದಲ್ಲಿಕಬ್ಬಿಣದ ಅದಿರು ಖನಿಜಕ್ಕಾಗಿ ಕೋರಿ ಸಲ್ಲಿಸಿರುವ ಗಣಿ ಗುತ್ತಿಗೆ ಅರ್ಜಿ ಸಂಖ್ಯೆ: 1102 ಎಎಂಎಲ್ 2006ನ್ನು ಪರಿಶೀಲಿಸಿದೆ.

ಅರ್ಜಿದಾರರು ಗಣಿಗುತ್ತಿಗೆಗಾಗಿ ಕೋರಿರುವ ಪ್ರದೇಶವು ಪೂರ್ವ ಅರ್ಜಿ 1502 AML 04, 777AML 05, 1503 AML 04, 99 APL 06, Old ML No.922ರ ಪ್ರದೇಶದ ಮೇಲೆ ಅತಿವ್ಯಾಪ್ತಿಯಾಗುತ್ತಿದ್ದು, ಈ ಬಗ್ಗೆ ಉಲ್ಲೇಖ (1)ರ ಈ ಕಛೇರಿ ನೋಟೀಸ್‌ಗೆ ಅರ್ಜಿದಾರರು ಉಲ್ಲೇಖ (2)ರಲ್ಲಿ ಉತ್ತರಿಸುತ್ತಾ, ಎಲ್ಲಾ ಅರ್ಜಿಗಳ ಸಂಯುಕ್ತ ನಕಾಶೆಯನ್ನು ಒದಗಿಸುವಂತೆ ಕೋರಿರುತ್ತಾರೆ. ಆದರೆ, ಸಂಯುಕ್ತ ನಕಾಶೆಯನ್ನು ಪೂರೈಸುವ ವ್ಯವಸ್ಥೆ ಇರುವುದಿಲ್ಲ. ಅಪೇಕ್ಷಿತ ಪ್ರದೇಶವು ಪೂರ್ಣ ಪ್ರಮಾಣದಲ್ಲಿ ಅತಿವ್ಯಾಪ್ತಿಯಾಗುತ್ತಿದ್ದು, ಸದರಿ ಗಣಿಗುತ್ತಿಗೆ ಅರ್ಜಿಯನ್ನು ಪರಿಗಣಿಸಲು ಸ್ಥಳದ ಲಭ್ಯತೆ ಇಲ್ಲದೇ ಇರುವ ಹಿನ್ನೆಲೆಯಲ್ಲಿ ಕೆಳಕಂಡ ಆದೇಶ.

**ಆದೇಶ**

ಸರ್ಕಾರದ ಆದೇಶ ಸಂಖ್ಯೆ: ಸಿಐ 03 ಎಂಎಂಎಂ 95 ದಿನಾಂಕ:27–05–1995 ಮತ್ತು ಸಿಐ 214 ಎಂಎಂಎಂ 2006 ದಿನಾಂಕ:09–02–2007ರನ್ವಯ ನಿರ್ದೇಶಕರು, ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ ಇವರಿಗೆ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಗಣಿಗುತ್ತಿಗೆ ಅರ್ಜಿ ಸಂಖ್ಯೆ 1102 ಎಎಂಎಲ್ 2006ನ್ನು ಮೇಲೆ ವಿವರಿಸಿದ ಕಾರಣಗಳಿಗಾಗಿ ತಿರಸ್ಕರಿಸಲಾಗಿದೆ.

ನಿರ್ದೇಶಕರು

ಪಿ.ಆರ್.1012 ಗಣಿ ಮತ್ತು ಭೂ ವಿಜ್ಞಾನ ಇಲಾಖೆ, ಬೆಂಗಳೂರು.

**ನಿರ್ದೇಶಕರು, ಗಣಿ ಮತ್ತು ಭೂ ವಿಜ್ಞಾನ ಇಲಾಖೆ, ಬೆಂಗಳೂರು ಇವರ ನಡವಳಿಗಳು**

**ಸಂಖ್ಯೆ: ಗಭೂಇ:ಗಗುಶಾ:265 ಎಎಂಎಲ್10:10–11/2562, ದಿನಾಂಕ:15ನೇ ಜೂನ್, 2010**

**ವಿಷಯ:** ಮೆ:ಅಕ್ಷಯ ಮೈನ್ಸ್ & ಮಿನರಲ್ಸ್ ರವರು ದಿನಾಂಕ: 02.03.2010 ರಂದು ಬಳ್ಳಾರಿ ಜಿಲ್ಲೆ, ಸಂಡೂರು ತಾಲ್ಲೂಕು, ದೋಣಿಮಲೈ ರೇಂಜ್ ನ 185.00 ಎಕರೆ ಪ್ರದೇಶದಲ್ಲಿ ಕಬ್ಬಿಣದ ಅದಿರು ಮತ್ತು ರೆಡ್ ಆಕ್ಸೈಡ್ ಖನಿಜಕ್ಕಾಗಿ ಸಲ್ಲಿಸಿರುವ ಗಣಿಗುತ್ತಿಗೆ ಅರ್ಜಿ ಬಗ್ಗೆ.

**ಉಲ್ಲೇಖ:**1. ಈ ಕಛೇರಿ ನೋಟೀಸ್ ಸಂಖ್ಯೆ: DMG: 265 AML 10:580-81 ದಿನಾಂಕ:03–05–2010.

2 ಅರ್ಜಿದಾರರ ವಿವರಣೆ ದಿ:21–05–2010.

**ಪ್ರಸ್ತಾವನೆ:**

ಮೆ:ಅಕ್ಷಯ ಮೈನ್ಸ್ & ಮಿನರಲ್ಸ್ ಇವರು ಬಳ್ಳಾರಿ ಜಿಲ್ಲೆ ಸಂಡೂರು ತಾಲ್ಲೂಕು, ದೋಣಿಮಲೈ ರೇಂಜ್ ನ 185.00 ಎಕರೆ ಪ್ರದೇಶದಲ್ಲಿಕಬ್ಬಿಣದ ಅದಿರು ಮತ್ತು ರೆಡ್ ಆಕ್ಸೈಡ್ ಖನಿಜಕ್ಕಾಗಿ ಕೋರಿ ಸಲ್ಲಿಸಿರುವ ಗಣಿ ಗುತ್ತಿಗೆ ಅರ್ಜಿ ಸಂಖ್ಯೆ:265 ಎಎಂಎಲ್ 2010ನ್ನು ಪರಿಶೀಲಿಸಿದೆ.

ಅರ್ಜಿದಾರರು ಗಣಿಗುತ್ತಿಗೆಗಾಗಿ ಕೋರಿರುವ ಪ್ರದೇಶವು M/s. MML ಸಂಸ್ಥೆಯ ಗಣಿಗುತ್ತಿಗೆ ಪ್ರದೇಶದ ಮೇಲೆ ಅತಿವ್ಯಾಪ್ತಿಯಾಗುತ್ತಿದ್ದು, ಅರ್ಜಿದಾರರು ಉಲ್ಲೇಖಿತ (2)ರ ಪತ್ರದಲ್ಲಿ ನೀಡಿರುವ ವಿವರಣೆಯಲ್ಲಿ 15 ದಿನಗಳೊಳಗೆ ಪರಿಷ್ಕೃತ ನಕ್ಷೆಯನ್ನು ಸಲ್ಲಿಸುವುದಾಗಿ ತಿಳಿಸಿರುತ್ತಾರೆ. ಆದರೆ, ಅಪೇಕ್ಷಿತ ಪ್ರದೇಶವು M/s. MML ರವರ ಗಣಿಗುತ್ತಿಗೆ ಸಂ.995ರ ಮೇಲೆ ಅತಿವ್ಯಾಪ್ತಿಯಾಗುತ್ತಿದ್ದು, ಸ್ಥಳದ ಲಭ್ಯತೆ ಇಲ್ಲದೇ ಇರುವ ಹಿನ್ನೆಲೆಯಲ್ಲಿ ಕೆಳಕಂಡ ಆದೇಶ

**ಆದೇಶ**

ಸರ್ಕಾರದ ಆದೇಶ ಸಂಖ್ಯೆ: ಸಿಐ 03 ಎಂಎಂಎಂ 95 ದಿನಾಂಕ:27–05–1995 ಮತ್ತು ಸಿಐ 214 ಎಂಎಂಎಂ 2006 ದಿನಾಂಕ:09–02–2007ರನ್ವಯ ನಿರ್ದೇಶಕರು, ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ ಇವರಿಗೆ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಗಣಿಗುತ್ತಿಗೆ ಅರ್ಜಿ ಸಂಖ್ಯೆ 265 ಎಎಂಎಲ್ 2010ನ್ನು ಮೇಲೆ ವಿವರಿಸಿದ ಕಾರಣಗಳಿಗಾಗಿ ತಿರಸ್ಕರಿಸಲಾಗಿದೆ.

ನಿರ್ದೇಶಕರು

ಗಣಿ ಮತ್ತು ಭೂ ವಿಜ್ಞಾನ ಇಲಾಖೆ, ಬೆಂಗಳೂರು.

**ನಿರ್ದೇಶಕರು, ಗಣಿ ಮತ್ತು ಭೂ ವಿಜ್ಞಾನ ಇಲಾಖೆ, ಬೆಂಗಳೂರು ಇವರ ನಡವಳಿಗಳು**

**ಸಂಖ್ಯೆ: ಗಭೂಇ:ಗಗುಶಾ:16 ಎಪಿಎಲ್99:10–11/2564, ದಿನಾಂಕ:15ನೇ ಜೂನ್, 2010**

**ವಿಷಯ:** ಮೆ: ನೀಮಾ ಎಂಟರ್ ಪ್ರೈಸಸ್ ಇವರು ದಿನಾಂಕ:05.04.1999 ರಂದು ಬಳ್ಳಾರಿ ಜಿಲ್ಲೆ, ಸಂಡೂರು ತಾಲ್ಲೂಕು, ಗಂಗಲಾಪುರ ಗ್ರಾಮದ 225–00 ಎಕರೆ ಪ್ರದೇಶದಲ್ಲಿ ಕಬ್ಬಿಣದ ಅದಿರು ಖನಿಜಕ್ಕಾಗಿ ಸಲ್ಲಿಸಿರುವ ಖನಿಜಾನ್ವೇಷಣಾ ಲೈಸೆನ್ಸ್ ಅರ್ಜಿ ಬಗ್ಗೆ.

**ಉಲ್ಲೇಖ:**1. ಈ ಕಛೇರಿ ನೋಟೀಸ್ ಸಂಖ್ಯೆ:ಗಭೂಇ:ಗಗುಶಾ:16 APL 99/10-11, 976-77, ದಿನಾಂಕ:20.04.2010.

2. ಅರ್ಜಿದಾರರ ವಿವರಣೆ ದಿ:20–05–2010.

**ಪ್ರಸ್ತಾವನೆ:**

ಮೆ: ನೀಮಾ ಎಂಟರ್ ಪ್ರೈಸಸ್ ಇವರು ಬಳ್ಳಾರಿ ಜಿಲ್ಲೆ, ಸಂಡೂರು ತಾಲ್ಲೂಕು, ಗಂಗಲಾಪುರ ಗ್ರಾಮದ 225–00 ಎಕರೆ ಪ್ರದೇಶದಲ್ಲಿ ಕಬ್ಬಿಣದ ಅದಿರು ಖನಿಜಕ್ಕಾಗಿ ಅನ್ವೇಷಣಾ ಲೈಸೆನ್ಸ್ ಕೋರಿ ಸಲ್ಲಿಸಿರುವ ಅರ್ಜಿ ಸಂಖ್ಯೆ:16 ಎಪಿಎಲ್ 99ನ್ನು ಪರಿಶೀಲಿಸಿದೆ.

ಖನಿಜಾನ್ವೇಷಣಾ ಲೈಸೆನ್ಸ್‌ಗಾಗಿ ಕೋರಿರುವ ಪ್ರದೇಶದ ಸರಿಯಾದ ನಕಾಶೆಯನ್ನು ಸಲ್ಲಿಸುವಂತೆ ಉಲ್ಲೇಖ (1)ರ ಈ ಕಛೇರಿ ನೋಟೀಸ್‌ನಲ್ಲಿ ತಿಳಿಸಲಾಗಿದ್ದು, ಅದಕ್ಕೆ ಅರ್ಜಿದಾರರು ಉಲ್ಲೇಖ (2)ರ ತಮ್ಮ ವಿವರಣೆಯಲ್ಲಿ 90 ದಿನಗಳ ಕಾಲಾವಕಾಶವನ್ನು ಕೋರಿರುತ್ತಾರೆ. ದಿನಾಂಕ:20.04.2010ರ ಈ ಕಛೇರಿ ನೋಟೀಸ್‌ನಲ್ಲಿ 30 ದಿನಗಳ ಕಾಲಾವಕಾಶವನ್ನು ನೀಡಿದ್ದರೂ ಸಹ ಮತ್ತೆ 90 ದಿನಗಳ ಕಾಲಾವಕಾಶವನ್ನು ಕೋರುತ್ತಿರುವುದು ಅರ್ಜಿದಾರರಿಗೆ ಅನ್ವೇಷಣಾ ಲೈಸೆನ್ಸ್ ಅರ್ಜಿಯನ್ನು ಮುಂದುವರಿಸುವಲ್ಲಿ ಆಸಕ್ತಿ ಇಲ್ಲವೆಂದು ಪರಿಗಣಿಸಿ, ಕೆಳಕಂಡ ಆದೇಶ.

**ಆದೇಶ**

ಸರ್ಕಾರದ ಆದೇಶ ಸಂಖ್ಯೆ: ಸಿಐ 03 ಎಂಎಂಎಂ 95 ದಿನಾಂಕ:27–05–1995 ಮತ್ತು ಸಿಐ 214 ಎಂಎಂಎಂ 2006 ದಿನಾಂಕ:09–02–2007ರನ್ವಯ ನಿರ್ದೇಶಕರು, ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ ಇವರಿಗೆ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಖನಿಜಾನ್ವೇಷಣಾ ಅರ್ಜಿ ಸಂಖ್ಯೆ 16 ಎಪಿಎಲ್ 99ನ್ನು ಮೇಲೆ ವಿವರಿಸಿದ ಕಾರಣಗಳಿಗಾಗಿ ತಿರಸ್ಕರಿಸಲಾಗಿದೆ.

ನಿರ್ದೇಶಕರು
ಗಣಿ ಮತ್ತು ಭೂ ವಿಜ್ಞಾನ ಇಲಾಖೆ, ಬೆಂಗಳೂರು.

**ನಿರ್ದೇಶಕರು, ಗಣಿ ಮತ್ತು ಭೂ ವಿಜ್ಞಾನ ಇಲಾಖೆ,ಬೆಂಗಳೂರು ಇವರ ನಡವಳಿಗಳು**

**ಸಂಖ್ಯೆ: ಗಭೂಇ:ಗಗುಶಾ:1016 ಎಎಂಎಲ್2006: 10–11/ 2566, ದಿನಾಂಕ:15ನೇ ಜೂನ್, 2010**

**ವಿಷಯ:** ಮೆ:ಲಕ್ಷ್ಮಿ ಮಿನರಲ್ಸ್ ರವರು ದಿನಾಂಕ: 19–10–2006ರಂದು ಬಳ್ಳಾರಿ ಜಿಲ್ಲೆ, ಸಂಡೂರು ತಾಲ್ಲೂಕು, ವೆಂಕಟಗಿರಿ ಗ್ರಾಮದ 70–00 ಎಕರೆ ಪ್ರದೇಶದಲ್ಲಿ ಕಬ್ಬಿಣದ ಅದಿರು ಖನಿಜಕ್ಕಾಗಿ ಸಲ್ಲಿಸಿರುವ ಗಣಿಗುತ್ತಿಗೆ ಅರ್ಜಿ ಬಗ್ಗೆ.

**ಉಲ್ಲೇಖ:**1. ಈ ಕಛೇರಿ ನೋಟೀಸ್ ಸಂಖ್ಯೆ:1016 ಎಎಂಎಲ್ 2006:5700–01 ದಿನಾಂಕ:25–03–2010.
2. ಅರ್ಜಿದಾರರ ವಿವರಣೆ ದಿ:30–03–2010.

**ಪ್ರಸ್ತಾವನೆ:**

ಮೆ:ಲಕ್ಷ್ಮಿ ಮಿನರಲ್ಸ್ ರವರು ಬಳ್ಳಾರಿ ಜಿಲ್ಲೆ ಸಂಡೂರು ತಾಲ್ಲೂಕು, ವೆಂಕಟಗಿರಿ ಗ್ರಾಮದ 70–00 ಎಕರೆ ಪ್ರದೇಶದಲ್ಲಿಕಬ್ಬಿಣದ ಅದಿರು ಖನಿಜಕ್ಕಾಗಿ ಕೋರಿ ಸಲ್ಲಿಸಿರುವ ಗಣಿ ಗುತ್ತಿಗೆ ಅರ್ಜಿ ಸಂಖ್ಯೆ:1016 ಎಎಂಎಲ್ 2006ನ್ನು ಪರಿಶೀಲಿಸಿದೆ.

ಅರ್ಜಿದಾರರು ಗಣಿಗುತ್ತಿಗೆಗಾಗಿ ಕೋರಿರುವ ಪ್ರದೇಶವು ಪೂರ್ವ ಅರ್ಜಿಗಳಾದ 1005 AML 05, 956 AML 05, 183 AML 05, 24 AML 01, 1008 AML 05, 1006 AML 05, 47 AML 95 ರ ಅರ್ಜಿ ಪ್ರದೇಶದ ಮೇಲೆ ಅತಿವ್ಯಾಪ್ತಿಯಾಗುತ್ತಿದ್ದು, ಈ ಬಗ್ಗೆ ಉಲ್ಲೇಖ (1)ರ ಈ ಕಛೇರಿ ನೋಟೀಸ್‌ಗೆ ಅರ್ಜಿದಾರರು ಉಲ್ಲೇಖ (2)ರಲ್ಲಿ ನೀಡಿರುವ ವಿವರಣೆಯು ಸಮಂಜಸವಾಗಿರುವುದಿಲ್ಲ. ಹಾಗೂ ಗಣಿಗುತ್ತಿಗೆ ಅರ್ಜಿಯನ್ನು ಪರಿಗಣಿಸಲು ಸ್ಥಳದ ಲಭ್ಯತೆ ಇಲ್ಲದೇ ಇರುವ ಹಿನ್ನೆಲೆಯಲ್ಲಿ ಕೆಳಕಂಡ ಆದೇಶ.

**ಆದೇಶ**

ಸರ್ಕಾರದ ಆದೇಶ ಸಂಖ್ಯೆ: ಸಿಐ 03 ಎಂಎಂಎಂ 95 ದಿನಾಂಕ:27–05–1995 ಮತ್ತು ಸಿಐ 214 ಎಂಎಂಎಂ 2006 ದಿನಾಂಕ:09–02–2007ರನ್ವಯ ನಿರ್ದೇಶಕರು, ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ ಇವರಿಗೆ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಗಣಿಗುತ್ತಿಗೆ ಅರ್ಜಿ ಸಂಖ್ಯೆ 1016 ಎಎಂಎಲ್ 2006ನ್ನು ಮೇಲೆ ವಿವರಿಸಿದ ಕಾರಣಗಳಿಗಾಗಿ ತಿರಸ್ಕರಿಸಲಾಗಿದೆ.

ನಿರ್ದೇಶಕರು
ಗಣಿ ಮತ್ತು ಭೂ ವಿಜ್ಞಾನ ಇಲಾಖೆ, ಬೆಂಗಳೂರು.

**ನಿರ್ದೇಶಕರು, ಗಣಿ ಮತ್ತು ಭೂ ವಿಜ್ಞಾನ ಇಲಾಖೆ,ಬೆಂಗಳೂರು ಇವರ ನಡವಳಿಗಳು**

**ಸಂಖ್ಯೆ: ಗಭೂಇ:ಗಗುಶಾ:495 ಎಎಂಎಲ್2004:10–11/2568, ದಿನಾಂಕ:15ನೇ ಜೂನ್, 2010**

**ವಿಷಯ:** ಶ್ರೀಮತಿ ಎನ್.ಜಿ.ಜ್ಯೋತಿ ರವರು ದಿ:28–08–2004ರಂದು ಬಳ್ಳಾರಿ ಜಿಲ್ಲೆ, ಸಂಡೂರು ತಾಲ್ಲೂಕು, ನಾರಾಯಣಪುರ ಗ್ರಾಮದ ಸರ್ವೆ ನಂ.99ರಲ್ಲಿ 5.00 ಹೆಕ್ಟೇರ್ ಪ್ರದೇಶದಲ್ಲಿಕಬ್ಬಿಣದ ಅದಿರು ಖನಿಜಕ್ಕಾಗಿ ಸಲ್ಲಿಸಿರುವ ಗಣಿಗುತ್ತಿಗೆ ಅರ್ಜಿ ಬಗ್ಗೆ.

**ಉಲ್ಲೇಖ:** 1. ಈ ಕಛೇರಿ ನೋಟೀಸ್ ಸಂಖ್ಯೆ: 495 ಎಎಂಎಲ್ 2004:24–25, ದಿನಾಂಕ:01–04–2010.

2. ಅರ್ಜಿದಾರರ ವಿವರಣೆ ದಿ:19–03–2010.

**ಪ್ರಸ್ತಾವನೆ:**

ಶ್ರೀಮತಿ ಎನ್.ಜಿ.ಜ್ಯೋತಿ ರವರು ಬಳ್ಳಾರಿ ಜಿಲ್ಲೆ ಸಂಡೂರು ತಾಲ್ಲೂಕು, ನಾರಾಯಣಪುರ ಗ್ರಾಮದ ಸರ್ವೆ ನಂ.99ರಲ್ಲಿ 5.00 ಹೆಕ್ಟೇರ್ ಎಕರೆ ಪ್ರದೇಶದಲ್ಲಿಕಬ್ಬಿಣದ ಅದಿರು ಖನಿಜಕ್ಕಾಗಿ ಕೋರಿ ಸಲ್ಲಿಸಿರುವ ಗಣಿ ಗುತ್ತಿಗೆ ಅರ್ಜಿ ಸಂಖ್ಯೆ: 495 ಎಎಂಎಲ್ 2004 ನ್ನು ಪರಿಶೀಲಿಸಿದೆ.

ಅರ್ಜಿದಾರರು ಗಣಿಗುತ್ತಿಗೆಗಾಗಿ ಕೋರಿರುವ ಪ್ರದೇಶವು ಮೆ:ಡೆಕ್ಕನ್ ಮೈನಿಂಗ್ ಸಿಂಡಿಕೇಟ್ ರವರ ಗ.ಗು. ಸಂ.2080(ಎ) ರ ಪ್ರದೇಶಕ್ಕೆ ಅತಿವ್ಯಾಪ್ತಿಯಾಗುತ್ತದೆಯೆಂದು ನೀಡಿದ ಉಲ್ಲೇಖ (1)ರ ಈ ಕಛೇರಿ ನೋಟೀಸ್‌ಗೆ ಅರ್ಜಿದಾರರು ಉಲ್ಲೇಖ (2)ರಲ್ಲಿ ನೀಡಿರುವ ವಿವರಣೆ ನೀಡುತ್ತಾ, ಅಪೇಕ್ಷಿತ ಪ್ರದೇಶವು ನಾರಾಯಣಪುರದಲ್ಲಿ ಬರುತ್ತಿದ್ದು, ಮೆ:ಡೆಕ್ಕನ್ ಮೈನಿಂಗ್ ಸಿಂಡಿಕೇಟ್ ರವರ ಗಣಿಗುತ್ತಿಗೆಯು ದೇವಗಿರಿ ಗ್ರಾಮದಲ್ಲಿ ಬರುವುದಾಗಿ ತಿಳಿಸಿ, ತಮ್ಮ ಅರ್ಜಿಯನ್ನು ಮುಂದುವರಿಸಲು ಕೋರಿದ್ದರು. ಪುನ: ಪರಿಶೀಲಿಸಲಾಗಿ, ಅಪೇಕ್ಷಿತ ಪ್ರದೇಶವು ಮೆ: ಟಿ.ಎಂ.ಪಿ.ಎಲ್. ರವರು ಅಧ್ಯರ್ಪಿಸಿದ ಪ್ರದೇಶವಾಗಿದ್ದು, ಮಂಜೂರು ಮಾಡಲು ನಿಯಮಗಳಲ್ಲಿ ಅವಕಾಶವಿರುವುದಿಲ್ಲ. ಅಧ್ಯರ್ಪಿಸಿದ ಪ್ರದೇಶವನ್ನು ಎಂಸಿಆರ್ 1960 ನಿಯಮ 59ರನ್ವಯ ಅಧಿಸೂಚಿಸಿದ ನಂತರ ಪರಿಗಣನೆಗೆ ಮುಕ್ತವಾಗುತ್ತದೆ. ಅಲ್ಲಿಯ ವರೆಗೆ ಸದರಿ ಪ್ರದೇಶಕ್ಕೆ ಸ್ವೀಕೃತಗೊಂಡ ಅರ್ಜಿಗಳು ಎಂಸಿಆರ್ 1960 ನಿಯಮ 60ರನ್ವಯ Pre-mature ಆಗುತ್ತವೆ. ಆದಕಾರಣ ಕೆಳಕಂಡ ಆದೇಶ.

**ಆದೇಶ**

ಸರ್ಕಾರದ ಆದೇಶ ಸಂಖ್ಯೆ: ಸಿಐ 03 ಎಂಎಂಎಂ 95 ದಿನಾಂಕ:27–05–1995 ಮತ್ತು ಸಿಐ 214 ಎಂಎಂಎಂ 2006 ದಿನಾಂಕ:09–02–2007ರನ್ವಯ ನಿರ್ದೇಶಕರು, ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ ಇವರಿಗೆ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಗಣಿಗುತ್ತಿಗೆ ಅರ್ಜಿ ಸಂಖ್ಯೆ 495 ಎಎಂಎಲ್ 2004ನ್ನು ಮೇಲೆ ವಿವರಿಸಿದ ಕಾರಣಗಳಿಗಾಗಿ ತಿರಸ್ಕರಿಸಲಾಗಿದೆ.

ನಿರ್ದೇಶಕರು

ಪಿ.ಆರ್.1013 ಗಣಿ ಮತ್ತು ಭೂ ವಿಜ್ಞಾನ ಇಲಾಖೆ, ಬೆಂಗಳೂರು.

**ನಿರ್ದೇಶಕರು, ಗಣಿ ಮತ್ತು ಭೂ ವಿಜ್ಞಾನ ಇಲಾಖೆ, ಬೆಂಗಳೂರು ಇವರ ನಡವಳಿಗಳು**

**ಸಂಖ್ಯೆ: ಗಭೂಇ:ಗಗುಶಾ:511 ಎಎಂಎಲ್2006: 10–11/2761, ದಿನಾಂಕ:18ನೇ ಜೂನ್, 2010**

**ವಿಷಯ:** ಶ್ರೀ ಆರ್.ವಿನಾಯಕ ರವರು ದಿನಾಂಕ: 25–05–2006ರಂದು ಬಳ್ಳಾರಿ ಜಿಲ್ಲೆ, ಸಂಡೂರು ತಾಲ್ಲೂಕು, ದೇವಗಿರಿ ಗ್ರಾಮದ 200–00 ಎಕರೆ ಪ್ರದೇಶದಲ್ಲಿಕಬ್ಬಿಣದ ಅದಿರು & ಮ್ಯಾಂಗನೀಸ್ ಖನಿಜಕ್ಕಾಗಿ ಸಲ್ಲಿಸಿರುವ ಗಣಿಗುತ್ತಿಗೆ ಅರ್ಜಿ ಬಗ್ಗೆ.

**ಉಲ್ಲೇಖ:** 1. ಈ ಕಛೇರಿ ನೋಟೀಸ್ ಸಂಖ್ಯೆ:511 ಎಎಂಎಲ್ 2006:5641, ದಿನಾಂಕ:25–03–2010.

2. ಅರ್ಜಿದಾರರ ವಿವರಣೆ ದಿ:16–04–2010.

**ಪ್ರಸ್ತಾವನೆ:**

ಶ್ರೀ ಆರ್.ವಿನಾಯಕ ರವರು ಬಳ್ಳಾರಿ ಜಿಲ್ಲೆ ಸಂಡೂರು ತಾಲ್ಲೂಕು, ದೇವಗಿರಿ ಗ್ರಾಮದ 200–00 ಎಕರೆ ಪ್ರದೇಶದಲ್ಲಿಕಬ್ಬಿಣದ ಅದಿರು & ಮ್ಯಾಂಗನೀಸ್ ಓರ್ ಖನಿಜಕ್ಕಾಗಿ ಸಲ್ಲಿಸಿರುವ ಗಣಿ ಗುತ್ತಿಗೆ ಅರ್ಜಿ ಸಂಖ್ಯೆ: 511 ಎಎಂಎಲ್ 2006ನ್ನು ಪರಿಶೀಲಿಸಿದೆ.

ಉಲ್ಲೇಖ (1)ರ ಈ ಕಛೇರಿ ನೋಟೀಸ್‌ನಲ್ಲಿ ಸರಿಯಾದ ನಕಾಶೆಗಳನ್ನು ಒದಗಿಸಲು ತಿಳಿಸಲಾಗಿದೆ. ಅರ್ಜಿದಾರರು ಉಲ್ಲೇಖ (2)ರಲ್ಲಿ ನ್ಯೂನತೆಗಳನ್ನು ಸರಿಪಡಿಸಿ, ಪರಿಷ್ಕೃತ ನಕ್ಷೆಯನ್ನು ಸಲ್ಲಿಸಿದ್ದು, ಪರಿಶೀಲಿಸಲಾಗಿದೆ. ಅರ್ಜಿದಾರರು ಗಣಿಗುತ್ತಿಗೆಗಾಗಿ ಕೋರಿರುವ ಪ್ರದೇಶವು ಪೂರ್ವ ಅರ್ಜಿ ML No.1111 ಹಾಗೂ 1131 AML 05, 1128AML 05, 449 AML 06 ರ ಪ್ರದೇಶದ ಮೇಲೆ ಪೂರ್ಣವಾಗಿ ಅತಿವ್ಯಾಪ್ತಿಯಾಗುತ್ತಿದ್ದು, ಸದರಿ ಗಣಿಗುತ್ತಿಗೆ ಅರ್ಜಿಯನ್ನು ಪರಿಗಣಿಸಲು ಸ್ಥಳದ ಲಭ್ಯತೆ ಇಲ್ಲದೇ ಇರುವ ಹಿನ್ನೆಲೆಯಲ್ಲಿ ಕೆಳಕಂಡ ಆದೇಶ.

**ಆದೇಶ**

ಸರ್ಕಾರದ ಆದೇಶ ಸಂಖ್ಯೆ: ಸಿಐ 03 ಎಂಎಂಎಂ 95 ದಿನಾಂಕ:27–05–1995 ಮತ್ತು ಸಿಐ 214 ಎಂಎಂಎಂ 2006 ದಿನಾಂಕ:09–02–2007ರನ್ವಯ ನಿರ್ದೇಶಕರು, ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ ಇವರಿಗೆ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಗಣಿಗುತ್ತಿಗೆ ಅರ್ಜಿ ಸಂಖ್ಯೆ 511 ಎಎಂಎಲ್ 2006ನ್ನು ಮೇಲೆ ವಿವರಿಸಿದ ಕಾರಣಗಳಿಗಾಗಿ ತಿರಸ್ಕರಿಸಲಾಗಿದೆ.

ನಿರ್ದೇಶಕರು
ಗಣಿ ಮತ್ತು ಭೂ ವಿಜ್ಞಾನ ಇಲಾಖೆ, ಬೆಂಗಳೂರು.

**ನಿರ್ದೇಶಕರು, ಗಣಿ ಮತ್ತು ಭೂ ವಿಜ್ಞಾನ ಇಲಾಖೆ, ಬೆಂಗಳೂರು ಇವರ ನಡವಳಿಗಳು**

**ಸಂಖ್ಯೆ: ಗಭೂಇ:ಗಗುಶಾ:08 ಎಪಿಎಲ್2007: 10–11/2560, ದಿನಾಂಕ:15ನೇ ಜೂನ್, 2010**

**ವಿಷಯ:** ಮೆ: ವಿಐಎಸ್‌ವಿ ಮೆಟಲ್ಸ್ ಕಂ.ಪ್ರೈ.ಲಿ., ಇವರು ಬಳ್ಳಾರಿ ಜಿಲ್ಲೆ, ಬಳ್ಳಾರಿ ಮತ್ತು ಸಂಡೂರು ತಾಲ್ಲೂಕು, ಮುರುತಲೆಗುಡ್ಡ & ಬಿಜಿಲಮ್ಮಗುಡ್ಡ ಗ್ರಾಮದ 330 ಹೆಕ್ಟೇರ್ ಪ್ರದೇಶದಲ್ಲಿ ಕಬ್ಬಿಣದ ಅದಿರು ಮತ್ತು ಇತರೆ ಖನಿಜಗಳಿಗಾಗಿ ಸಲ್ಲಿಸಿರುವ ಖನಿಜಾನ್ವೇಷಣಾ ಲೈಸೆನ್ಸ್ ಅರ್ಜಿ ಬಗ್ಗೆ.

**ಉಲ್ಲೇಖ:** 1. ಈ ಕಛೇರಿ ಪತ್ರ ಸಂಖ್ಯೆ:ಗಭೂಇ:ಗಗುಶಾ:08ಎಪಿಎಲ್ 07/07–08, ದಿನಾಂಕ:02–11–2007.
2. ಈ ಕಛೇರಿ ನೋಟೀಸ್ ಸಂಖ್ಯೆ: ಗಭೂಇ:ಗಗುಶಾ:08ಎಪಿಎಲ್ 07/10–11 942–43 ದಿನಾಂಕ:20.04.2010
3. ಅರ್ಜಿದಾರರ ವಿವರಣೆ ದಿ:05–04–2010.

**ಪ್ರಸ್ತಾವನೆ:**

ಮೆ: ವಿಐಎಸ್‌ವಿ ಮೆಟಲ್ಸ್ ಕಂ.ಪ್ರೈ.ಲಿ., ಇವರು ಬಳ್ಳಾರಿ ಜಿಲ್ಲೆ, ಬಳ್ಳಾರಿ ಮತ್ತು ಸಂಡೂರು ತಾಲ್ಲೂಕು, ಮುರುತಲೆಗುಡ್ಡ & ಬಿಜಿಲಮ್ಮಗುಡ್ಡ ಗ್ರಾಮದ 330 ಹೆಕ್ಟೇರ್ ಪ್ರದೇಶದಲ್ಲಿ ಕಬ್ಬಿಣದ ಅದಿರು ಮತ್ತು ಇತರೆ ಖನಿಜಗಳಿಗಾಗಿ ಅನ್ವೇಷಣಾ ಲೈಸೆನ್ಸ್ ಕೋರಿ ಅರ್ಜಿ ಸಲ್ಲಿಸಿರುವ ಅರ್ಜಿ ಸಂಖ್ಯೆ: 08 ಎಪಿಎಲ್ 2007ನ್ನು ಪರಿಶೀಲಿಸಿದೆ

ಖನಿಜಾನ್ವೇಷಣಾ ಲೈಸೆನ್ಸ್‌ಗಾಗಿ ಕೋರಿರುವ ಪ್ರದೇಶದ ಸರಿಯಾದ ನಕಾಶೆಗಳನ್ನು ಸಲ್ಲಿಸುವಂತೆ ಉಲ್ಲೇಖ (1)ರಲ್ಲಿ ಅರ್ಜಿದಾರರಿಗೆ ಪತ್ರ ಬರೆಯಲಾಗಿತ್ತು. ಪುನಃ ಉಲ್ಲೇಖ (2)ರ ಈ ಕಛೇರಿ ನೋಟೀಸ್‌ನಲ್ಲಿ ಈ ಬಗ್ಗೆ ತಿಳಿಸಲಾಗಿದ್ದು, ಅದಕ್ಕೆ ಅರ್ಜಿದಾರರು ಉಲ್ಲೇಖ (3)ರ ತಮ್ಮ ವಿವರಣೆಯಲ್ಲಿ 60 ದಿನಗಳ ಕಾಲಾವಕಾಶವನ್ನು ಕೋರಿರುತ್ತಾರೆ. 3 ವರ್ಷಗಳಾದರೂ ಪರಿಷ್ಕೃತ ನಕಾಶೆಯನ್ನು ಸಲ್ಲಿಸುವಲ್ಲಿ ವಿಫಲರಾಗಿರುವ ಕಾರಣ, ಕಾಲಾವಕಾಶ ಕೋರಿರುವುದನ್ನು ಅರ್ಜಿದಾರರ ಅನಾಸಕ್ತಿ ಎಂದು ಪರಿಗಣಿಸಿ, ಕೆಳಕಂಡ ಆದೇಶ.

**ಆದೇಶ**

ಸರ್ಕಾರದ ಆದೇಶ ಸಂಖ್ಯೆ: ಸಿಐ 03 ಎಂಎಂಎಂ 95 ದಿನಾಂಕ:27–05–1995 ಮತ್ತು ಸಿಐ 214 ಎಂಎಂಎಂ 2006 ದಿನಾಂಕ:09–02–2007ರನ್ವಯ ನಿರ್ದೇಶಕರು, ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ ಇವರಿಗೆ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಖನಿಜಾನ್ವೇಷಣಾ ಅರ್ಜಿ ಸಂಖ್ಯೆ 08 ಎಪಿಎಲ್ 2007ನ್ನು ಮೇಲೆ ವಿವರಿಸಿದ ಕಾರಣಗಳಿಗಾಗಿ ತಿರಸ್ಕರಿಸಲಾಗಿದೆ.

ನಿರ್ದೇಶಕರು
ಪಿ.ಆರ್.1014 ಗಣಿ ಮತ್ತು ಭೂ ವಿಜ್ಞಾನ ಇಲಾಖೆ, ಬೆಂಗಳೂರು.

**ನಿರ್ದೇಶಕರು, ಗಣಿ ಮತ್ತು ಭೂ ವಿಜ್ಞಾನ ಇಲಾಖೆ, ಬೆಂಗಳೂರು ಇವರ ನಡವಳಿಗಳು**

**ಸಂಖ್ಯೆ: ಗಭೂಇ:ಗಗುಶಾ:2340 ಎಎಂಎಲ್2007: 10–11/4699, ದಿನಾಂಕ:18ನೇ ಜೂನ್, 2010**

**ವಿಷಯ:** ಶ್ರೀ ಎಂ.ಡಿ.ರಮೇಶ್ ಇವರು ಬಳ್ಳಾರಿ ಜಿಲ್ಲೆ, ಸಂಡೂರು ತಾಲ್ಲೂಕು, ದೇವಗಿರಿ ಗ್ರಾಮದ 86–00 ಎಕರೆ ಪ್ರದೇಶದಲ್ಲಿ ಐರನ್ ಓರ್ ಮತ್ತು ಮ್ಯಾಂಗನೀಸ್ ಖನಿಜಕ್ಕಾಗಿ ಸಲ್ಲಿಸಿರುವ ಗಣಿಗುತ್ತಿಗೆ ಅರ್ಜಿ ಬಗ್ಗೆ.

**ಉಲ್ಲೇಖ:**1. ಈ ಕಛೇರಿ ನೋಟೀಸ್ ಸಂಖ್ಯೆ: DMG/2340 AML 07/09–10/13906–07/ ದಿನಾಂಕ:28–01–2010.

**ಪ್ರಸ್ತಾವನೆ:**

ಶ್ರೀ ಎಂ.ಡಿ.ರಮೇಶ್ ಇವರು ಬಳ್ಳಾರಿ ಜಿಲ್ಲೆ, ಸಂಡೂರು ತಾಲ್ಲೂಕು, ದೇವಗಿರಿ ಗ್ರಾಮದ 86–00 ಎಕರೆ ಪ್ರದೇಶದಲ್ಲಿಐರನ್ ಓರ್ ಮತ್ತು ಮ್ಯಾಂಗನೀಸ್ ಖನಿಜಕ್ಕಾಗಿ ಕೋರಿ ಸಲ್ಲಿಸಿರುವ ಗಣಿಗುತ್ತಿಗೆ ಅರ್ಜಿ ಸಂಖ್ಯೆ:2340 ಎಎಂಎಲ್ 2007 ಅನ್ನು ಪರಿಶೀಲಿಸಿದೆ.

ಅರ್ಜಿದಾರರು ದಿನಾಂಕ:22–12–2009ರಂದು ಸಲ್ಲಿಸಿರುವ ಪರಿಷ್ಕೃತ ನಕಾಶೆಯ ಪ್ರದೇಶವು, ಗಣಿಗುತ್ತಿಗೆಗಾಗಿ ಕೋರಿ ದಿನಾಂಕ:05–09–2007ರಂದು ಅರ್ಜಿ ಜೊತೆ ಸಲ್ಲಿಸಿರುವ ಮೂಲ ನಕಾಶೆಯ ಪ್ರದೇಶದ ಹೊರಗಡೆ ಬರುತ್ತಿರುವುದು ರೇಖಾನಕ್ಷೆ ವಿಭಾಗದಲ್ಲಿ ನಡೆಸಿದ ಪರಿಶೀಲನೆಯಿಂದ ತಿಳಿದುಬಂದಿರುತ್ತದೆ. ಆದರೆ, ಅರ್ಜಿದಾರರು ಸರ್ವೆ ನಂಬರುಗಳ ಬದಲಾವಣೆಯಾಗಿರುತ್ತದೆಯೆಂದು ತಮ್ಮ ವಿವರಣೆಯಲ್ಲಿ ತಿಳಿಸಿರುತ್ತಾರೆ. ಸರ್ವೆ ನಂಬರುಗಳ ಬದಲಾವಣೆಯಾದರೂ ಸಹಿತ ಪ್ರದೇಶ ಬದಲಾವಣೆಯಾಗಲಾರದು. ಅಲ್ಲದೆ, ಚಾಲ್ತಿಯಲ್ಲಿರುವ ಗಣಿ ಗುತ್ತಿಗೆ ಸಂ.1179ರ ಪ್ರದೇಶಕ್ಕೆ ಅತಿವ್ಯಾಪ್ತಿಯಾಗುತ್ತಿದೆ.

ಅರ್ಜಿದಾರರು ತಮ್ಮ ಮನವಿಯಲ್ಲಿ ನೀಡಿರುವ ವಿವರಣೆಯು ಸಮಂಜಸವಾಗಿಲ್ಲದಿರುವುದರಿಂದ, ಸದರಿ ಪ್ರದೇಶದಲ್ಲಿಗಣಿಗುತ್ತಿಗೆಗೆ ಅನುಮತಿ ನೀಡಲು ಅವಕಾಶ ಇಲ್ಲದೇ ಇರುವ ಹಿನ್ನೆಲೆಯಲ್ಲಿ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

ಸರ್ಕಾರದ ಆದೇಶ ಸಂಖ್ಯೆ: ಸಿಐ 03 ಎಂಎಂಎಂ 95 ದಿನಾಂಕ:27–05–1995ರನ್ವಯ ನಿರ್ದೇಶಕರು ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ ಇವರಿಗೆ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಗಣಿಗುತ್ತಿಗೆ ಅರ್ಜಿ ಸಂಖ್ಯೆ 2340 ಎಎಂಎಲ್ 2007, ಅರ್ಜಿಯನ್ನು ಮೇಲೆ ವಿವರಿಸಿದ ಕಾರಣಗಳಿಗಾಗಿ ತಿರಸ್ಕರಿಸಲಾಗಿದೆ.

ನಿರ್ದೇಶಕರು

ಗಣಿ ಮತ್ತು ಭೂ ವಿಜ್ಞಾನ ಇಲಾಖೆ, ಬೆಂಗಳೂರು.

**ನಿರ್ದೇಶಕರು, ಗಣಿ ಮತ್ತು ಭೂ ವಿಜ್ಞಾನ ಇಲಾಖೆ, ಬೆಂಗಳೂರು ಇವರ ನಡವಳಿಗಳು**

**ಸಂಖ್ಯೆ: ಗಭೂಇ:ಗಗುಶಾ:2337 ಎಎಂಎಲ್2007: 10–11/4696, ದಿನಾಂಕ:18ನೇ ಜೂನ್, 2010**

**ವಿಷಯ:** ಶ್ರೀ ಎಸ್. ಉಮೇಶ್ ಇವರು ಬಳ್ಳಾರಿ ಜಿಲ್ಲೆ, ಸಂಡೂರು ತಾಲ್ಲೂಕು, ದೇವಗಿರಿ ಗ್ರಾಮದ 86–00 ಎಕರೆ ಪ್ರದೇಶದಲ್ಲಿ ಐರನ್ ಓರ್ ಮತ್ತು ಮ್ಯಾಂಗನೀಸ್ ಖನಿಜಕ್ಕಾಗಿ ಸಲ್ಲಿಸಿರುವ ಗಣಿಗುತ್ತಿಗೆ ಅರ್ಜಿ ಬಗ್ಗೆ.

**ಉಲ್ಲೇಖ:1.** ಈ ಕಛೇರಿ ನೋಟೀಸ್ ಸಂಖ್ಯೆ: DMG/2337 AML 07/09-10/13910-11/ ದಿನಾಂಕ:28–01–2010.

**ಪ್ರಸ್ತಾವನೆ:**

ಶ್ರೀ ಎಸ್. ಉಮೇಶ್ ಇವರು ಬಳ್ಳಾರಿ ಜಿಲ್ಲೆ, ಸಂಡೂರು ತಾಲ್ಲೂಕು, ದೇವಗಿರಿ ಗ್ರಾಮದ 86–00 ಎಕರೆ ಪ್ರದೇಶದಲ್ಲಿಐರನ್ ಓರ್ ಮತ್ತು ಮ್ಯಾಂಗನೀಸ್ ಖನಿಜಕ್ಕಾಗಿ ಕೋರಿ ಸಲ್ಲಿಸಿರುವ ಗಣಿಗುತ್ತಿಗೆ ಅರ್ಜಿ ಸಂಖ್ಯೆ:2337 ಎಎಂಎಲ್ 2007 ಅನ್ನು ಪರಿಶೀಲಿಸಿದೆ.

ಅರ್ಜಿದಾರರು ದಿನಾಂಕ:22–12–2009ರಂದು ಸಲ್ಲಿಸಿರುವ ಪರಿಷ್ಕೃತ ನಕಾಶೆಯ ಪ್ರದೇಶವು, ಗಣಿಗುತ್ತಿಗೆಗಾಗಿ ಕೋರಿ ದಿನಾಂಕ:05–09–2007ರಂದು ಅರ್ಜಿ ಜೊತೆ ಸಲ್ಲಿಸಿರುವ ಮೂಲ ನಕಾಶೆಯ ಪ್ರದೇಶದ ಹೊರಗಡೆ ಬರುತ್ತಿರುವುದು ರೇಖಾನಕ್ಷೆ ವಿಭಾಗದಲ್ಲಿ ನಡೆಸಿದ ಪರಿಶೀಲನೆಯಿಂದ ತಿಳಿದುಬಂದಿರುತ್ತದೆ. ಆದರೆ, ಅರ್ಜಿದಾರರು ಸರ್ವೆ ನಂಬರುಗಳ ಬದಲಾವಣೆಯಾಗಿರುತ್ತದೆಯೆಂದು ತಮ್ಮ ವಿವರಣೆಯಲ್ಲಿ ತಿಳಿಸಿರುತ್ತಾರೆ. ಸರ್ವೆ ನಂಬರುಗಳ ಬದಲಾವಣೆಯಾದರೂ ಸಹಿತ ಪ್ರದೇಶ ಬದಲಾವಣೆಯಾಗಲಾರದು. ಅಲ್ಲದೆ, ಚಾಲ್ತಿಯಲ್ಲಿರುವ ಗಣಿ ಗುತ್ತಿಗೆ ಸಂ.1179ರ ಪ್ರದೇಶಕ್ಕೆ ಅತಿವ್ಯಾಪ್ತಿಯಾಗುತ್ತಿದೆ.

ಅರ್ಜಿದಾರರು ತಮ್ಮ ಮನವಿಯಲ್ಲಿ ನೀಡಿರುವ ವಿವರಣೆಯು ಸಮಂಜಸವಾಗಿಲ್ಲದಿರುವುದರಿಂದ, ಸದರಿ ಪ್ರದೇಶದಲ್ಲಿಗಣಿಗುತ್ತಿಗೆಗೆ ಅನುಮತಿ ನೀಡಲು ಅವಕಾಶ ಇಲ್ಲದೇ ಇರುವ ಹಿನ್ನೆಲೆಯಲ್ಲಿ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

ಸರ್ಕಾರದ ಆದೇಶ ಸಂಖ್ಯೆ: ಸಿಐ 03 ಎಂಎಂಎಂ 95 ದಿನಾಂಕ:27–05–1995ರನ್ವಯ ನಿರ್ದೇಶಕರು ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ ಇವರಿಗೆ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಗಣಿಗುತ್ತಿಗೆ ಅರ್ಜಿ ಸಂಖ್ಯೆ 2337 ಎಎಂಎಲ್ 2007, ಅರ್ಜಿಯನ್ನು ಮೇಲೆ ವಿವರಿಸಿದ ಕಾರಣಗಳಿಗಾಗಿ ತಿರಸ್ಕರಿಸಲಾಗಿದೆ.

ನಿರ್ದೇಶಕರು

ಪಿ.ಆರ್.1028 ಗಣಿ ಮತ್ತು ಭೂ ವಿಜ್ಞಾನ ಇಲಾಖೆ, ಬೆಂಗಳೂರು.

**ನಿರ್ದೇಶಕರು, ಗಣಿ ಮತ್ತು ಭೂ ವಿಜ್ಞಾನ ಇಲಾಖೆ, ಬೆಂಗಳೂರು ಇವರ ನಡವಳಿಗಳು**

**ಸಂಖ್ಯೆ: ಗಭೂಇ:ಗಗುಶಾ:152 ಎಎಂಎಲ್ 94: 10–11/2533, ದಿನಾಂಕ:4ನೇ ಜೂನ್, 2010**

**ವಿಷಯ:** ಶ್ರೀ ಅಸ್‌ಗರ್ ಖಾನ್ ರವರು ದಿನಾಂಕ: 14–09–1994 ರಂದು ಬಳ್ಳಾರಿ ಜಿಲ್ಲೆ, ಹೊಸಪೇಟೆ ತಾಲ್ಲೂಕು, ಹಾರವನಹಳ್ಳಿ ಗ್ರಾಮದಲ್ಲಿ 708.26 ಎಕರೆ ಪ್ರದೇಶದಲ್ಲಿಕ್ವಾಡ್ಜ್ ಖನಿಜಕ್ಕಾಗಿ ಸಲ್ಲಿಸಿರುವ ಗಣಿಗುತ್ತಿಗೆ ಅರ್ಜಿ ಬಗ್ಗೆ.

**ಉಲ್ಲೇಖ:** ಈ ಕಛೇರಿ ಸೂಚನಾ ಪತ್ರ ಸಂಖ್ಯೆ:DMG: 152 AML 94:751 ದಿನಾಂಕ:24–04–2008.

**ಪ್ರಸ್ತಾವನೆ:**

ಶ್ರೀ ಅಸ್‌ಗರ್ ಖಾನ್ ರವರು ಬಳ್ಳಾರಿ ಜಿಲ್ಲೆ ಸಂಡೂರು ತಾಲ್ಲೂಕು, ಹೊಸಪೇಟೆ ತಾಲ್ಲೂಕು, ಹಾರವನಹಳ್ಳಿ ಗ್ರಾಮದಲ್ಲಿ 708.26 ಎಕರೆ ಪ್ರದೇಶದಲ್ಲಿಕ್ವಾಡ್ಜ್ ಖನಿಜಕ್ಕಾಗಿ ಕೋರಿ ಸಲ್ಲಿಸಿರುವ ಗಣಿಗುತ್ತಿಗೆ ಅರ್ಜಿ ಸಂಖ್ಯೆ:152 ಎಎಂಎಲ್ 1994ನ್ನು ಪರಿಶೀಲಿಸಿದೆ.

ಅರ್ಜಿದಾರರು ಗಣಿಗುತ್ತಿಗೆಗಾಗಿ ಕೋರಿರುವ ಪ್ರದೇಶದ ಬಗ್ಗೆ ಅರಣ್ಯ ಇಲಾಖೆಯಿಂದ ಯಾವುದೇ ಪ್ರತಿಕ್ರಿಯೆ ಬಂದಿಲ್ಲವೆಂಬ ಕಾರಣಕ್ಕಾಗಿ ಉಲ್ಲೇಖ (1)ರ ಈ ಕಛೇರಿ ಸೂಚನಾ ಪತ್ರ ಜಾರಿ ಮಾಡಿ, ಅರ್ಜಿದಾರರಿಂದ ವಿವರಣೆಯನ್ನು ಕೋರಲಾಗಿತ್ತು. ಆದರೆ, ಅರ್ಜಿದಾರರಿಂದ ವಿವರಣೆ ಬಂದಿರುವುದಿಲ್ಲ. ಆದುದರಿಂದ ಅರ್ಜಿಯನ್ನು ಮುಂದುವರಿಸಲು ಅರ್ಜಿದಾರರಿಗೆ ಆಸಕ್ತಿ ಇಲ್ಲವೆಂದು ಭಾವಿಸಿ, ಕೆಳಕಂಡ ಆದೇಶ

**ಆದೇಶ**

ಸರ್ಕಾರದ ಆದೇಶ ಸಂಖ್ಯೆ: ಸಿಐ 03 ಎಂಎಂಎಂ 95 ದಿನಾಂಕ:27–05–1995 ಮತ್ತು ಸಿಐ 214 ಎಂಎಂಎಂ 2006 ದಿನಾಂಕ:09–02–2007ರನ್ವಯ ನಿರ್ದೇಶಕರು, ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ ಇವರಿಗೆ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಗಣಿಗುತ್ತಿಗೆ ಅರ್ಜಿ ಸಂಖ್ಯೆ 152 ಎಎಂಎಲ್ 1994ನ್ನು ಮೇಲೆ ವಿವರಿಸಿದ ಕಾರಣಗಳಿಗಾಗಿ ತಿರಸ್ಕರಿಸಲಾಗಿದೆ.

ನಿರ್ದೇಶಕರು

ಪಿ.ಆರ್.930 ಗಣಿ ಮತ್ತು ಭೂ ವಿಜ್ಞಾನ ಇಲಾಖೆ, ಬೆಂಗಳೂರು.

**ನಿರ್ದೇಶಕರು, ಗಣಿ ಮತ್ತು ಭೂ ವಿಜ್ಞಾನ ಇಲಾಖೆ, ಬೆಂಗಳೂರು ಇವರ ನಡವಳಿಗಳು**

**ಸಂಖ್ಯೆ: ಗಭೂಇ:ಗಗುಶಾ:960 ಎಎಂಎಲ್2008: 10–11/2541, ದಿನಾಂಕ:4ನೇ ಜೂನ್, 2010**

**ವಿಷಯ:** Sri Ataur Rahaman A.Shaik ರವರು ಬಳ್ಳಾರಿ ಜಿಲ್ಲೆ, ಸಂಡೂರು ತಾಲ್ಲೂಕಿನ 40–00 ಎಕರೆ ಪ್ರದೇಶದಲ್ಲಿಕಬ್ಬಿಣದ ಅದಿರು & ಮ್ಯಾಂಗನೀಸ್ ಖನಿಜಕ್ಕಾಗಿ ಸಲ್ಲಿಸಿರುವ ಗಣಿಗುತ್ತಿಗೆ ಅರ್ಜಿ ಬಗ್ಗೆ.

**ಉಲ್ಲೇಖ:** 1. ಈ ಕಛೇರಿ ನೋಟೀಸ್ ಸಂಖ್ಯೆ: DMG: 960 AML 08:15233-34 ದಿನಾಂಕ:11–02–2010.

2. ಅರ್ಜಿದಾರರ ವಿವರಣೆ ದಿ:20–03–2010.

**ಪ್ರಸ್ತಾವನೆ:**

Sri Ataur Rahaman A.Shaik ಇವರು ಬಳ್ಳಾರಿ ಜಿಲ್ಲೆ, ಕೂಡ್ಲಿಗಿ ತಾಲ್ಲೂಕು ಸಂಡೂರು ತಾಲ್ಲೂಕಿನ 40–00 ಎಕರೆ ಪ್ರದೇಶದಲ್ಲಿಕಬ್ಬಿಣದ ಅದಿರು & ಮ್ಯಾಂಗನೀಸ್ ಖನಿಜಕ್ಕಾಗಿ ಕೋರಿ ಸಲ್ಲಿಸಿರುವ ಗಣಿಗುತ್ತಿಗೆ ಅರ್ಜಿ ಸಂಖ್ಯೆ:960 ಎಎಂಎಲ್ 2008ನ್ನು ಪರಿಶೀಲಿಸಿದೆ. ಅರ್ಜಿದಾರರು ಗಣಿಗುತ್ತಿಗೆಗಾಗಿ ಕೋರಿರುವ ಪ್ರದೇಶವು 52 AML 08, 29 APL 82, 1177

AML 85 ಮತ್ತು Old ML area of Sri Venkataswamy Naidu ಪ್ರದೇಶದ ಮೇಲೆ ಅತಿವ್ಯಾಪ್ತಿಯಾಗುತ್ತಿದೆ. ಉಲ್ಲೇಖಿತ ಈ ಕಛೇರಿ ನೋಟೀಸ್‌ಗೆ ಅರ್ಜಿದಾರರು ದಿನಾಂಕ:20–03–2010ರ ಪತ್ರದಲ್ಲಿ ಉತ್ತರ ನೀಡಿ, Value addition ಬಗ್ಗೆ proposal ತಯಾರಿಸುತ್ತಿದ್ದು, ತಮ್ಮ ಅರ್ಜಿಯನ್ನು ಪರಿಗಣಿಸ ಬೇಕೆಂದು ಕೋರಿರುತ್ತಾರೆ. ಆದರೆ, ಅಪೇಕ್ಷಿತ ಪ್ರದೇಶವು ಮೂರು ಪೂರ್ವ ಅರ್ಜಿಗಳ ಮತ್ತು ಅವಧಿ ಮುಗಿದ ಗುತ್ತಿಗೆ ಪ್ರದೇಶಕ್ಕೆ ಅತಿವ್ಯಾಪ್ತಿಯಾಗುತ್ತಿರುವುದರಿಂದ ಪರಿಗಣಿಸಲು ಸ್ಥಳದ ಲಭ್ಯತೆ ಇರುವುದಿಲ್ಲ. ಅಂತೆಯೇ ಕೆಳಕಂಡ ಆದೇಶ.

**ಆದೇಶ**

ಸರ್ಕಾರದ ಆದೇಶ ಸಂಖ್ಯೆ: ಸಿಐ 03 ಎಂಎಂಎಂ 95 ದಿನಾಂಕ:27–05–1995 ಮತ್ತು ಸಿಐ 214 ಎಂಎಂಎಂ 2006 ದಿನಾಂಕ:09–02–2007ರನ್ವಯ ನಿರ್ದೇಶಕರು, ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ ಇವರಿಗೆ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಗಣಿಗುತ್ತಿಗೆ ಅರ್ಜಿ ಸಂಖ್ಯೆ 960 ಎಎಂಎಲ್ 2008ನ್ನು ಮೇಲೆ ವಿವರಿಸಿದ ಕಾರಣಗಳಿಗಾಗಿ ತಿರಸ್ಕರಿಸಲಾಗಿದೆ.

ನಿರ್ದೇಶಕರು

ಪಿ.ಆರ್.952 ಗಣಿ ಮತ್ತು ಭೂ ವಿಜ್ಞಾನ ಇಲಾಖೆ, ಬೆಂಗಳೂರು.

**ಕರ್ನಾಟಕ ವಿಧಾನ ಪರಿಷತ್ತು**

**ವಿಧಾನ ಪರಿಷತ್ತಿನ ಸಚಿವಾಲಯ, ಅಂಚೆ ಪೆಟ್ಟಿಗೆ ಸಂಖ್ಯೆ:5079, ವಿಧಾನಸೌಧ, ಬೆಂಗಳೂರು–560 001**

**ಸಂಖ್ಯೆ: ಕವಿಪ/ಶಾರಶಾ/138/ಇತರೆ/2008, ಬೆಂಗಳೂರು, ದಿನಾಂಕ:21ನೇ ಜುಲೈ, 2010**

**ವಿಷಯ:** ಕರ್ನಾಟಕ ವಿಧಾನ ಪರಿಷತ್ತಿನ ಸದಸ್ಯರಾದ ಶ್ರೀ ವೀರಕುಮಾರ್ ಅಪ್ಪಾಸೋ ಪಾಟೀಲ್ ಇವರ ವಿಳಾಸ ಬದಲಾವಣೆಯ ಬಗ್ಗೆ.

ವಿಧಾನ ಪರಿಷತ್ತಿನ ಮಾನ್ಯ ಸದಸ್ಯರಾದ ಶ್ರೀ ವೀರಕುಮಾರ್ ಅಪ್ಪಾಸೋ ಪಾಟೀಲ ರವರ ಹೆಸರಿಗೆ ಕಳುಹಿಸುವ ಎಲ್ಲಾ ಪತ್ರ ಹಾಗೂ ಮಾಹಿತಿಗಳನ್ನು ಈ ಕೆಳಕಂಡ ವಿಳಾಸಕ್ಕೆ ಕಳುಹಿಸಿಕೊಡಬೇಕೆಂದು ಕೋರಿರುವ ಹಿನ್ನಲೆಯಲ್ಲಿ, ವಿಳಾಸ ಬದಲಾವಣೆ ಬಗ್ಗೆ ರಾಜ್ಯ ಪತ್ರದಲ್ಲಿ ಪ್ರಕಟಿಸಿ ಎಲ್ಲಾ ಇಲಾಖೆಗಳ ಮಾಹಿತಿಗಾಗಿ ರವಾನಿಸಲು ಕ್ರಮ ಕೈಗೊಳ್ಳಬೇಕೆಂದು ಕೋರಲು ನಿರ್ದೇಶಿತನಾಗಿದ್ದೇನೆ.

ಶ್ರೀ ವೀರಕುಮಾರ್ ಅಪ್ಪಾಸೋ ಪಾಟೀಲ<br>
ವಿಧಾನ ಪರಿಷತ್ತಿನ ಸದಸ್ಯರು,<br>
# 1104, ಅನ್ರಿಯಾಡ್ವೆಲಿಂಗ್‌ಟನ್ ಅಪಾರ್ಟ್‌ಮೆಂಟ್ಸ್,<br>
ನಂ.1, 1ನೇ ಮುಖ್ಯರಸ್ತೆ, ಲೊಟ್ಟೇಗೊಲ್ಲಹಳ್ಳಿ, ಡಾಲರ್ಸ್ ಕಾಲೋನಿ,<br>
ಆರ್.ಎಂ.ವಿ. 2ನೇ ಹಂತ, ಬೆಂಗಳೂರು–560 094.

**ಎನ್. ಬಾಲಗುರು**

ಪಿ.ಆರ್.1176 ಅಧೀನ ಕಾರ್ಯದರ್ಶಿ,<br>
ಕರ್ನಾಟಕ ವಿಧಾನ ಪರಿಷತ್ತು.

**ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ**

**ಕಾರ್ಯನಿರ್ವಾಹಕ ಇಂಜಿನಿಯರ್ (ವಿ) ರವರ ಕಛೇರಿ, ಬೃಹತ್ ಕಾಮಗಾರಿ ವಿಭಾಗ, ಕ.ವಿ.ಪ್ರ.ನಿ.ನಿ.**

**2ನೇ ಮಹಡಿ, ಹನುಮಂತಪ್ಪ ಕಟ್ಟಡ, ಪಿ.ಬಿ. ರಸ್ತೆ, ದಾವಣಗೆರೆ**

**ಪ್ರಕಟಣೆ**

**ಸಂಖ್ಯೆ: ಕಾ.ನಿ.ಇಂ.(ವಿ) ಬೃ.ಕಾ.ವಿ/ದಾ:1271–73, ದಿನಾಂಕ:24ನೇ ಜುಲೈ, 2010**

ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತವು ವಿದ್ಯುತ್ ಸರಬರಾಜು ಕಾಯಿದೆ 2003ರ ಸೆಕ್ಷನ್ 67ರಡಿಯಲ್ಲಿ ಯೋಜನೆಗಳನ್ನು ರೂಪಿಸಿದೆ ಮತ್ತು ಇದೇ ಕಾಯಿದೆ ಸೆಕ್ಷನ್ 67(2)ರನ್ವಯ ಸಾರ್ವಜನಿಕರಿಗೆ ಯೋಜನೆಗಳ ಮಾಹಿತಿ ನೀಡುವ ದೃಷ್ಟಿಯಿಂದ ಈ ಪ್ರಕಟಣೆಯನ್ನು ಇಲ್ಲಿ ಪ್ರಕಟಿಸಲಾಗಿದೆ.

**1) ಯೋಜನೆಯ ಹೆಸರು:** ದಾವಣಗೆರೆ ಜಿಲ್ಲೆ, ಹರಪನಹಳ್ಳಿ ತಾಲ್ಲೂಕು, ನೀಲಗುಂದದಲ್ಲಿ ನಿರ್ಮಿಸಲು ಉದ್ದೇಶಿಸಿರುವ 220/66/11 ಕೆ.ವಿ. ವಿದ್ಯುತ್ ಉಪಕೇಂದ್ರಕ್ಕೆ ಹಾಲಿ ಇರುವ ಗುತ್ತೂರು–ಇಟಗಿ 220 ಕೆ.ವಿ. ಒಂಟಿ ಮಾರ್ಗದಿಂದ ಉದ್ದೇಶಿತ ನೀಲಗುಂದ 220/66/11 ಕೆ.ವಿ. ವಿದ್ಯುತ್ ಉಪಕೇಂದ್ರಕ್ಕೆ 3.44 ಕಿ.ಮೀ. ಉದ್ದದ 220 ಕೆ.ವಿ. ಜೋಡಿ ಮಾರ್ಗ ನಿರ್ಮಿಸುವುದು.

**ಉದ್ದೇಶಿತ ಮಾರ್ಗದ ಉದ್ದ:** 3.44 ಕಿ.ಮೀ.

**ಅಂದಾಜು ವೆಚ್ಚ ರೂ. :** 230.05 ಲಕ್ಷಗಳು.

**ಹಾದು ಹೋಗುವ ಹಳ್ಳಿಗಳು:** ಮಚ್ಚಿಹಳ್ಳಿ, ಗುರುಸಂದ್ರ, ಬೈರಪುರ, ನೀಲಗುಂದ ಸರಹದ್ದಿನಲ್ಲಿ ಹಾದುಹೋಗುವುದು.

**2) ಯೋಜನೆಯ ಹೆಸರು:** ಉದ್ದೇಶಿತ 66 ಕೆ.ವಿ. ಜೋಡಿ ಮಾರ್ಗವನ್ನು ಡಿ.ಸಿ. ಗೋಪುರದ ಮೇಲೆ ದಾವಣಗೆರೆ ಜಿಲ್ಲೆ, ಹರಪನಹಳ್ಳಿ ತಾಲ್ಲೂಕಿನಲ್ಲಿ ನೀಲಗುಂದದಲ್ಲಿ ನಿರ್ಮಿಸಲು ಉದ್ದೇಶಿಸಿರುವ 220/66/11 ಕೆ.ವಿ. ಉಪಕೇಂದ್ರದಿಂದ ದಾವಣಗೆರೆ–ಹರಪನಹಳ್ಳಿ 66 ಕೆ.ವಿ. ಒಂಟಿ ಮಾರ್ಗದ ಹಾಲಿ ಗೋಪುರದ ಸಂಖ್ಯೆ:361ಎ ವರೆಗೆ 0.62 ಕಿ.ಮೀ. ಉದ್ದದ ವಿದ್ಯುತ್ ಮಾರ್ಗ ನಿರ್ಮಿಸುವುದು.

**ಉದ್ದೇಶಿತ ಮಾರ್ಗದ ಉದ್ದ:** 0.62 ಕಿ.ಮೀ.

**ಅಂದಾಜು ವೆಚ್ಚ ರೂ.** 33.49 ಲಕ್ಷಗಳು.

**ಹಾದು ಹೋಗುವ ಹಳ್ಳಿಗಳು:** ನೀಲಗುಂದ ಸರಹದ್ದಿನಲ್ಲಿ ಹಾದು ಹೋಗುವುದು.

**3) ಯೋಜನೆಯ ಹೆಸರು:** ಉದ್ದೇಶಿತ 66 ಕೆ.ವಿ. ಒಂಟಿ ಮಾರ್ಗವನ್ನು ಡಿ.ಸಿ. ಗೋಪುರದ ಮೇಲೆ ದಾವಣಗೆರೆ ಜಿಲ್ಲೆ, ಹರಪನಹಳ್ಳಿ ತಾಲ್ಲೂಕಿನ ನೀಲಗುಂದದಲ್ಲಿ ನಿರ್ಮಿಸಲು ಉದ್ದೇಶಿಸಿರುವ 220/66/11 ಕೆ.ವಿ. ಉಪಕೇಂದ್ರದಿಂದ ಹಾಲಿ ಇರುವ ಹಲವಾಗಿಲು 66 ಕೆ.ವಿ. ಒಂಟಿ ಮಾರ್ಗಕ್ಕೆ 3.97 ಕಿ.ಮೀ. ಉದ್ದದ ವಿದ್ಯುತ್ ಮಾರ್ಗವನ್ನು ನಿರ್ಮಿಸುವುದು.

**ಉದ್ದೇಶಿತ ಮಾರ್ಗದ ಉದ್ದ:** 3.97 ಕಿ.ಮೀ.

**ಅಂದಾಜು ವೆಚ್ಚ ರೂ.:** 84.02 ಲಕ್ಷಗಳು.

**ಹಾದು ಹೋಗುವ ಹಳ್ಳಿಗಳು:** ನೀಲಗುಂದ, ಜಿ.ದೊಡ್ಡಪುರ ಸರಹದ್ದಿನಲ್ಲಿ ಹಾದು ಹೋಗುವುದು.

**4) ಯೋಜನೆ ಹೆಸರು:** ಉದ್ದೇಶಿತ 66 ಕೆ.ವಿ ಮಾನೋ ವೋಲ್ಟೇಜ್ ಮಾರ್ಗವನ್ನು ಭಾಗಶಃ ಎಂ.ಸಿ. ಗೋಪುರ ಮತ್ತು ಭಾಗಶಃ ಡಿ.ಸಿ. ಗೋಪುರಗಳ ಮೇಲೆ ದಾವಣಗೆರೆ ಜಿಲ್ಲೆ, ಹರಪನಹಳ್ಳಿ ತಾಲ್ಲೂಕಿನ ನೀಲಗುಂದದಲ್ಲಿ ನಿರ್ಮಿಸಲು ಉದ್ದೇಶಿಸಿರುವ 220/66/11 ಕೆ.ವಿ. ವಿದ್ಯುತ್ ಉಪಕೇಂದ್ರದಿಂದ ಹಾಲಿ ಇರುವ ದಾವಣಗೆರೆ–ಹರಪನಹಳ್ಳಿ 66 ಕೆ.ವಿ. ಒಂಟಿ ಮಾರ್ಗಕ್ಕೆ 0.89 ಕಿ.ಮೀ. ಉದ್ದದ ವಿದ್ಯುತ್ ಮಾರ್ಗವನ್ನು ನಿರ್ಮಿಸುವುದು.

**ಉದ್ದೇಶಿತ ಮಾರ್ಗದ ಉದ್ದ:** 0.89 ಕಿ.ಮೀ.

**ಅಂದಾಜು ವೆಚ್ಚ ರೂ.:** 109.59 ಲಕ್ಷಗಳು.

**ಹಾದು ಹೋಗುವ ಹಳ್ಳಿಗಳು:** ನೀಲಗುಂದ ಸರಹದ್ದಿನಲ್ಲಿ ಹಾದು ಹೋಗುವುದು.

**5) ಯೋಜನೆಯ ಹೆಸರು:** ಉದ್ದೇಶಿತ 66ಕೆ.ವಿ. ಒಂಟಿ ಮಾರ್ಗವನ್ನು ಡಿ.ಸಿ. ಗೋಪುರದ ಮೇಲೆ ದಾವಣಗೆರೆ ಜಿಲ್ಲೆ, ಹರಪನಹಳ್ಳಿ ತಾಲ್ಲೂಕಿನಲ್ಲಿ ನೀಲಗುಂದದಲ್ಲಿ ನಿರ್ಮಿಸಲು ಉದ್ದೇಶಿಸಿರುವ 220/66/11 ಕೆ.ವಿ. ಉಪಕೇಂದ್ರದಿಂದ ಹಾಲಿ ಇರುವ 66/11 ಕೆ.ವಿ. ಪಲ್ಲಾಗಟ್ಟೆ ಉಪಕೇಂದ್ರದವರೆಗೆ 24.13 ಕಿ.ಮೀ. ಉದ್ದದ ವಿದ್ಯುತ್ ಮಾರ್ಗವನ್ನು ನಿರ್ಮಿಸುವುದು.

**ಉದ್ದೇಶಿತ ಮಾರ್ಗದ ಉದ್ದ:** 24.13 ಕಿ.ಮೀ.

**ಅಂದಾಜು ವೆಚ್ಚ ರೂ.:** 405.52 ಲಕ್ಷಗಳು.

**ಹಾದು ಹೋಗುವ ಹಳ್ಳಿಗಳು:** ನೀಲಗುಂದ, ಬೈರಪುರ, ಮಚ್ಚಿಹಳ್ಳಿ, ಚಿರಸ್ತಾತಹಳ್ಳಿ, ಗುಂಡಿಹಟ್ಟಿ, ಯಡೆಹಳ್ಳಿ, ಅಲಿಗನ್ನಿಕೆರೆ, ಬಿಕ್ಕಿಕಟ್ಟೆ, ಕೊರಚರಹಟ್ಟಿ, ವದ್ದರಹಳ್ಳಿ, ಹಲ್ಲಿಕೆರೆ, ತಾಂಡಾ, ಕಂಚಿಕೆರೆ, ಪುನಬಾಗಟ್ಟಾ ಸರಹದ್ದಿನಲ್ಲಿ ಹಾದು ಹೋಗುವುದು.

**6) ಯೋಜನೆಯ ಹೆಸರು:** ಹಾಲಿ ಇರುವ ದಾವಣಗೆರೆ–ಚಿತ್ರದುರ್ಗ ನಂ–2, 66 ಕೆ.ವಿ. ಎಸ್.ಸಿ. ಮಾರ್ಗದಲ್ಲಿನ ವಾಹಕ ಮತ್ತು ಟವರ್‌ಗಳನ್ನು ತೆಗೆದು ಡಿ.ಸಿ. ಟವರ್‌ಗಳ ಮೇಲೆ ಕಯೋಟ್ ವಾಹಕ ಎಳೆದು 55.697 ಕಿ.ಮೀ. ಉದ್ದದ 66 ಕೆ.ವಿ. ಮಾರ್ಗವನ್ನು (ಹಾಲಿ ಮಾರ್ಗದ ಮೊಗಸಾಲೆಯಲ್ಲಿ) ನಿರ್ಮಿಸುವುದು.

**ಉದ್ದೇಶಿತ ಮಾರ್ಗದ ಉದ್ದ:** 55.697 ಕಿ.ಮೀ.

**ಅಂದಾಜು ವೆಚ್ಚ ರೂ.:** 771.90 ಲಕ್ಷಗಳು.

**ಹಾದು ಹೋಗುವ ಹಳ್ಳಿಗಳು:** ದಾವಣಗೆರೆ, ಅವರೆಗೆರೆ, ಪಮಾನಕೆರೆ, ದಾವಣಗೆರೆ, ತಲೌನಹಳ್ಳಿ, ಕಲಪನಹಳ್ಳಿ, ಚೊಟಬಾಲಾನಹಳ್ಳಿ, ಗೊಲ್ಲರಹಳ್ಳಿ, ಮಲ್ಲೂರೆಹಳ್ಳಿ, ಮಸುತ್ತಿನಹಳ್ಳಿ, ಕರಿಲೊಕ್ಕೆನಹಳ್ಳಿ, ಕೊಗ್ಗನೂರು, ಶಿದ್ರನೂರು, ನೆರಟಗಿ, ಅನಗೋಡು, ಅಲವರ್ತಿ, ಹೆಬ್ಬಾಳ್, ಹುಣಸೆಕಟ್ಟೆ, ಹೆಗ್ಗೆರಿ, ಕಲಹಳ್ಳಿ, ಗೊಲ್ಲರಹಟ್ಟಿ, ಚಿಕ್ಕಬೆನ್ನೂರು, ಸಿರಿಗೆರೆ, ಗೌರಮ್ಮನಹಳ್ಳಿ, ವಿಜಯಪುರ–ಗೊಲ್ಲರಹಟ್ಟಿ, ಬೆಲ್ಲಗಟ್ಟಿ, ಸದರಹಳ್ಳಿ, ಮರಗಟ್ಟ, ಗುಲೆನಹಳ್ಳಿ, ಶಿವಬಾರ, ಗುತಿನಾಡು, ಶಿವಬಾಗಿ, ಚಿತ್ರದುರ್ಗ.

**7) ಯೋಜನೆಯ ಹೆಸರು:** ಹಾಲಿ ಇರುವ ದಾವಣಗೆರೆ–ಚಿತ್ರದುರ್ಗ ನಂ–1, 66 ಕೆ.ವಿ. ಎಸ್.ಸಿ. ಮಾರ್ಗದಲ್ಲಿನ ವಾಹಕ ಮತ್ತು ಟವರ್‌ಗಳನ್ನು ತೆಗೆದು ಡಿ.ಸಿ. ಟವರ್‌ಗಳ ಮೇಲೆ ಕಯೋಟ್ ವಾಹಕ ಎಳೆದು 53.843 ಕಿ.ಮೀ. ಉದ್ದದ 66 ಕೆ.ವಿ.. ಮಾರ್ಗವನ್ನು (ಹಾಲಿ ಮಾರ್ಗದ ಮೊಗಸಾಲೆಯಲ್ಲಿ) ನಿರ್ಮಿಸುವುದು.

**ಉದ್ದೇಶಿತ ಮಾರ್ಗದ ಉದ್ದ:** 53.843 ಕಿ.ಮೀ.

**ಅಂದಾಜು ವೆಚ್ಚ ರೂ.:** 649.58 ಲಕ್ಷಗಳು.

**ಹಾದು ಹೋಗುವ ಹಳ್ಳಿಗಳು:** ದಾವಣಗೆರೆ, ಅವರಗೆರೆ, ಆಂಜನೇಯ ಮಿಲ್, ಹೆಚ್. ಕಲಪನಹಳ್ಳಿ, ಗೊಲ್ಲರಹಟ್ಟಿ, ಮಲ್ಲಸಹಟ್ಟಿಹಳ್ಳಿ, ಕಗ್ಗನೂರು, ಆನಗೊಡು, ಅನವಟ್ಟಿ, ಹೆಬ್ಬಾಳ್, ಹುನಸಕಟ್ಟೆಹಳ್ಳಿ, ಯಮೆಟ್ಟಿ, ಹಂಪನೂರು, ಹೆಗ್ಗೆರಿ, ಕಲಹಲ್, ಚಿಕ್ಕಬೆನ್ನೂರು, ಹಿರೆಬೆನ್ನೂರು, ಸಿರಿಗೆರೆ ಸರ್ಕಲ್, ಗೊವ್ರಮನಹಳ್ಳಿ, ವಿಶಾಲಪುರ (ಗೊಲ್ಲರಹಟ್ಟಿ), ಲಕ್ಷ್ಮಿಪುರ, ಸದರಹಳ್ಳಿ, ಬೆಲ್ಲಗಟ್ಟಿ, ಮರಗಟ್ಟಾ, ಶಿವಬಗಿ, ಶಿವಬಾರ ಮತ್ತು ಚಿತ್ರದುರ್ಗ ಸರಹದ್ದಿನಲ್ಲಿ ಹಾದುಹೋಗುವುದು.

**8) ಯೋಜನೆಯ ಹೆಸರು:** ದಾವಣಗೆರೆ ಜಿಲ್ಲೆ, ಹರಪನಹಳ್ಳಿ ತಾಲ್ಲೂಕು, ಹಲವಾಗಿಲು 66 ಕೆ.ವಿ. ವಿದ್ಯುತ್ ವಿತರಣಾ ಕೇಂದ್ರದಿಂದ ಜಿ. ದಾದಾಪುರದವರೆಗೆ 66 ಕೆ.ವಿ. ಎಸ್.ಸಿ. ಮಾರ್ಗದಲ್ಲಿನ ವಾಹಕ ಮತ್ತು ಭಾಗಶಃ ಟವರ್‌ಗಳನ್ನು ತೆಗೆದು ಡಿ.ಸಿ. ಟವರ್‌ಗಳ ಮೇಲೆ ಕಯೋಟ್ ವಾಹಕ ಎಳೆದು 12.12 ಕಿ.ಮೀ. ಉದ್ದದ 66 ಕೆ.ವಿ. ಮಾರ್ಗವನ್ನು (ಹಾಲಿ ಮಾರ್ಗದ ಮೊಗಸಾಲೆಯಲ್ಲಿ) ನಿರ್ಮಿಸುವುದು.

**ಉದ್ದೇಶಿತ ಮಾರ್ಗದ ಉದ್ದ:** 12.12 ಕಿ.ಮೀ.

**ಅಂದಾಜು ವೆಚ್ಚ ರೂ.:** 99.30 ಲಕ್ಷಗಳು.

**ಹಾದು ಹೋಗುವ ಹಳ್ಳಿಗಳು:** ಜಿ.ದೊಡ್ಡಪುರ, ಅಲಿಗಿಲಾವಾಡ, ಅಲಿಗಿಲಾವಾಡ ತಾಂಡಾ, ಯೆರಸಲು, ಗಿರಿಯಾಪುರ ತಾಂಡಾ, ಮತ್ತೂರು ಮತ್ತು ಹಲಾವಾಗಿಲು ವ್ಯಾಪ್ತಿ.

**9) ಯೋಜನೆಯ ಹೆಸರು:** ಹಾಲಿ ಇರುವ ದಾವಣಗೆರೆ ಜಿಲ್ಲೆ, 220/66 ಕೆ.ವಿ. ದಾವಣಗೆರೆ ವಿದ್ಯುತ್ ವಿತರಣಾ ಕೇಂದ್ರದಿಂದ 66/11 ಕೆ.ವಿ. ಲಿಂಗದಹಳ್ಳಿ ಉಪವಿದ್ಯುತ್ ಕೇಂದ್ರದವರೆಗೆ 66 ಕೆ.ವಿ. ಎಸ್.ಸಿ. ಮಾರ್ಗದಲ್ಲಿನ ವಾಹಕ ಮತ್ತು ಟವರ್‌ಗಳನ್ನು ತೆಗೆದು ಡಿ.ಸಿ. ಟವರ್‌ಗಳ ಮೇಲೆ ಕಯೋಟ್ ವಾಹಕ ಎಳೆದು 39.68 ಕಿ.ಮೀ. ಉದ್ದದ 66 ಕೆ.ವಿ. ಮಾರ್ಗವನ್ನು (ಹಾಲಿ ಮಾರ್ಗದ ಮೊಗಸಾಲೆಯಲ್ಲಿ) ನಿರ್ಮಿಸುವುದು.

**ಉದ್ದೇಶಿತ ಮಾರ್ಗದ ಉದ್ದ:** 39.68 ಕಿ.ಮೀ.

**ಅಂದಾಜು ವೆಚ್ಚ ರೂ.:** 766.69 ಲಕ್ಷಗಳು.

**ಹಾದು ಹೋಗುವ ಹಳ್ಳಿಗಳು:** ದಾವಣಗೆರೆ, ಸೆರೆನಸೊನಡನಹಳ್ಳಿ, ಹೊನ್ನಾಮಾ ಕೊನಿವಾಡ ಕ್ಯಾಪ್, ಕೊಡನಾಹಳ್ಳಿ, ತ್ಯಾವಣಗಿ, ದೊಡ್ಡಘಟ್ಟ, ಕಬಾಳ, ಕೆರೆಬಿಳಚಿ, ಹೊಸಹಳ್ಳಿ, ಸೆವನಗರ್ ಮತ್ತು ಲಿಂಗದಳ್ಳಿ.

ಕರ್ನಾಟಕ ವಿದ್ಯುತ್ ಪ್ರಸರಣಾ ನಿಗಮ ನಿಯಮಿತವು ಮೇಲೆ ತಿಳಿಸಿದ ಯೋಜನೆಗಳನ್ನು ಕಾರ್ಯಗತಗೊಳಿಸಲು 1885ರ ಭಾರತೀಯ ಟೆಲಿಗ್ರಾಫ್ ಭಾಗ–III (ಕೇಂದ್ರಿಯ ಕಾಯ್ದೆ 1885ರ 13 ಅನ್ವಯ) ಅಧಿನಿಯಮ, ಟೆಲಿಗ್ರಾಫ್ ಹೊಂದಿರುವ ಎಲ್ಲಾ ಅಧಿಕಾರಗಳನ್ನು ಹೊಂದಿರುತ್ತದೆ ಹಾಗೂ ಚಲಾಯಿಸುತ್ತದೆ. ಸದರಿ ಯೋಜನೆಗಳಿಗೆ ಆಕ್ಷೇಪಣೆಗಳೇನಾದರೂ ಇದ್ದಲ್ಲಿ ನಿಗಮದ ಪರಿಗಣನೆಗಾಗಿ ಆಕ್ಷೇಪಣೆಗಳನ್ನು ಈ ಪ್ರಕಟಣೆ ಪ್ರಕಟವಾದ 30 ದಿನಗಳ ಒಳಗಾಗಿ ಕಾರ್ಯನಿರ್ವಾಹಕ ಅಭಿಯಂತರರು (ವಿ), ಬೃಹತ್ ಕಾಮಗಾರಿ ವಿಭಾಗ, ಕವಿಪ್ರನಿನಿ, ಆರ್.ಹೆಚ್. ಬಿಲ್ಡಿಂಗ್, ಎರಡನೇ ಮಹಡಿ, ಪಿ.ಬಿ. ರಸ್ತೆ, ದಾವಣಗೆರೆ–2 ಇವರಿಗೆ ಕಳುಹಿಸುವುದು.

ಕಾರ್ಯನಿರ್ವಾಹಕ
ಇಂಜಿನೀಯರ್ (ವಿ), ಬೃಹತ್
ಕಾಮಗಾರಿ ವಿಭಾಗ, ಕವಿಪ್ರನಿನಿ.,
ದಾವಣಗೆರೆ.

ಪಿಡಿ–92

**ಕೃಷಿ ಮಾರಾಟ ಇಲಾಖೆ**

**ಕೃಷಿ ಮಾರಾಟ ನಿರ್ದೇಶಕರ ಕಛೇರಿ, ನಂ.16, 2ನೇ ರಾಜಭವನ ರಸ್ತೆ, ಪಿ.ಬಿ. ನಂ.5309, ಬೆಂಗಳೂರು–01**

**ಅಧಿಸೂಚನೆ**

**ಸಂಖ್ಯೆ: ಕೃಮಾಇ/146/ ನಿಯವಿ/2010, ದಿನಾಂಕ:9ನೇ ಜುಲೈ, 2010**

ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ ಮತ್ತು ಅಭಿವೃದ್ಧಿ) ಅಧಿನಿಯಮ 1966ರ ಪ್ರಕರಣ 6ರ ಉಪಪ್ರಕರಣ (2) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕದಲ್ಲಿ ಕೃಷಿ ಮಾರಾಟ ಇಲಾಖೆಯ ನಿರ್ದೇಶಕನಾಗಿರುವ ಜಿ. ರಾಮಚಂದ್ರ ಆದ ನಾನು ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ, ತುಮಕೂರು ಇದರ ಮಾರುಕಟ್ಟೆ ಕ್ಷೇತ್ರದಲ್ಲಿ ಈ ಕೆಳಗೆ ನಮೂದಿಸಿರುವಂತೆ ಅಧಿಸೂಚಿಸಲ್ಪಟ್ಟಿರುವ 112 ಕೃಷಿ ಉತ್ಪನ್ನಗಳ ಮಾರಾಟ ನಿಯಂತ್ರಣಕ್ಕಾಗಿ ತುಮಕೂರು ತಾಲ್ಲೂಕು ಹೆಬ್ಬೂರು ಹೋಬಳಿ, ಹೆಬ್ಬೂರು ಗ್ರಾಮದ ಪರಿಮಿತಿಯೊಳಗಿನ ಪ್ರದೇಶವನ್ನು 3 ಎಕರೆ ಜಮೀನಿನ ಪ್ರದೇಶವನ್ನು "ಉಪ ಮಾರುಕಟ್ಟೆ" ಎಂದು ಹಾಗೂ ಈ ಕೆಳಗಿನ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿದ ಪ್ರದೇಶವನ್ನು "ಉಪ ಮಾರುಕಟ್ಟೆ ಪ್ರಾಂಗಣ" ಎಂದು ಘೋಷಿಸಿದ್ದೇನೆ.

**ಕೃಷಿ ಉತ್ಪನ್ನಗಳು**

(1) ಜಾನುವಾರುಗಳು, (2) ಮೇಕೆಗಳು, (3) ಕುರಿಗಳು, (4) ಹತ್ತಿ (ಬೀಜ ತೆಗೆದ ಮತ್ತು ತೆಗೆಯದ), (5) ಎಲ್ಲಾ ಹೂ.ಗಳು, (6) ಸಜ್ಜೆ, (7) ಜವೆ ಗೋಧಿ, (8) ಜೋಳ, (9) ಕಂಬು, (10) ಮೆಕ್ಕೆಜೋಳ, (11) ನವಣೆ, (12) ಭತ್ತ, (13) ರಾಗಿ, (14) ಅಕ್ಕಿ, (15) ಸಾಮೆ (ಸಾವೆ), (16) ಗೋಧಿ, (17) ಅಂಟುವಾಳ, (18) ಬೊಂಬು, (19) ಬೆತ್ತ, (20) ಹಿಪ್ಪೆಬೀಜ, (21) ಹೊಂಗೇಬೀಜ, (22) ಬೇವಿನಬೀಜ, (23) ಸೀಗೇಕಾಯಿ, (24) ಹುಣಸೇಹಣ್ಣು, (25) ಹುಣಸೇಬೀಜ, (26) ಸೇಬು, (27) ಬಾಳೆಹಣ್ಣು, (28) ಬೋರೆಹಣ್ಣು, (29) ಹುಳಿಹಣ್ಣುಗಳು, (30) ಚಕ್ಕೋತನಹಣ್ಣು, (31) ಪೇರಲೆಹಣ್ಣು (ಸೀಬೆಹಣ್ಣು), (32) ದ್ರಾಕ್ಷಿ, (33) ಹಲಸಿನಹಣ್ಣು, (34) ಜಂಬುನೇರಳೆ ಹಣ್ಣು, (35) ನಿಂಬೆಹಣ್ಣು, (36) ಕರಬೂಜ, (37) ಮಾವಿನಹಣ್ಣು, (38) ಮೂಸಂಬಿ, (39) ಮರಸೇಬು, (40) ಪೈನಾಪಲ್ (ಅನಾನಸ್), (41) ಪಪ್ಪಾಯಿಹಣ್ಣು (ಪರಂಗಿಹಣ್ಣು), (42) ದಾಳಿಂಬೆಹಣ್ಣು, (43) ಸಪೋಟಾ, (44) ಸಿದ್ದೋಟ, (45) ಕಿತ್ತಾಳೆ, (46) ಕಲ್ಲಂಗಡಿ, (47) ನೆಲಗಡಲೆ (ಶೇಂಗಾ) (ಕಾಯಿ ಮತ್ತು ಬೀಜ), (48) ಹರಳುಬೀಜ, (49) ಹತ್ತಿಬೀಜ, (50) ಅಗಸೆಬೀಜ, (51) ಸಾಸುವೆ, (52) ಹುಚ್ಚೆಳ್ಳು, (53) ಕುಸುಬೆ, (54) ಎಳ್ಳು, (55) ಸೂರ್ಯಕಾಂತಿಬೀಜ, (56) ಸೋಯಾಬಿನ್, (57) ಅಡಿಕೆ, (58) ಗೋಡಂಬಿಬೀಜ, (59) ಒಣಮೆಣಸಿನಕಾಯಿ, (60) ತೆಂಗಿನಕಾಯಿ, (61) ಕೊಬ್ಬರಿ, (62) ಕೊತ್ತಂಬರಿಬೀಜ (ಧನಿಯಾ), (63) ಬೆಳ್ಳುಳ್ಳಿ, (64) ಶುಂಠಿ, (65) ಮೆಂತ್ಯ, (66) ಕಾಳುಮೆಣಸು, (67) ಅರಿಶಿನ, (68) ಅಲಸಂದೆ (ಇಡೀ ಮತ್ತು ಒಡೆದ), (69) ಅವರೆ (ಇಡೀ ಮತ್ತು ಒಡೆದ), (70) ಕಡಲೆ (ಇಡೀ ಮತ್ತು ಒಡೆದ), (71) ಉದ್ದು (ಇಡೀ ಮತ್ತು ಒಡೆದ), (72) ಬುಲ್ಲರ್ (ಇಡೀ ಮತ್ತು ಒಡೆದ), (73) ಹೆಸರು (ಇಡೀ ಮತ್ತು ಒಡೆದ), (74) ಹುರುಳಿ, (75) ಲಾಕ್ (ಇಡೀ ಮತ್ತು ಒಡೆದ), (76) ಮಡಿಕೆ (ಮಟಕಿ) (ಇಡೀ ಮತ್ತು ಒಡೆದ), (77) ಚೆನ್ನಂಗಿ (ಮಸೂರಿ) (ಇಡೀ ಮತ್ತು ಒಡೆದ), (78) ಬಟಾಣಿ, (79) ತೊಗರಿ (ಇಡೀ ಮತ್ತು ಒಡೆದ), (80) ಮೋಠ್ (ಇಡೀ ಮತ್ತು ಒಡೆದ), (81) ಎಲ್ಲಾ ತರಕಾರಿಗಳು (ಸೊಪ್ಪುಗಳು ಸೇರಿಸಿ) (ಗರ್ಕಿನ್ ಹೊರತುಪಡಿಸಿ), (82) ಕಾಯಿಗಳು, (83) ಹಸಿರುಮೆಣಸಿನಕಾಯಿ, (84) ಈರುಳ್ಳಿ, (85) ಆಲೂಗಡ್ಡೆ, (86) ಸುವರ್ಣಗೆಡ್ಡೆ, (87) ಸಿಹಿಗೆಣಸು (ಗೆಣಸು), (88) ಟೊಮ್ಯಾಟೋ, (89) ಬೀಟೆ (ರೋಸ್‌ವುಡ್), (90) ಬಿಲ್ವಾಲ, (91) ಗಂಜಾನ್, (92), ಹಡಗ, (93) ಹಳದಿ, (94) ಹನಿಮತ್ತಲ್, (95) ಹೊನ್ನೆ, (96) ಐಯಾನಿ, (97) ಹಲಸಿನಮರ, (98) ಜಂಬೆ, (99) ಕಲನ್, (100) ಕಿಂಡಲ್, (101) ಮಾವಿನಮರ, (102) ಮತ್ತಿ, (103) ನಂದಿ, (104) ರಾಂಪತ್ರೆ, (105) ತೇಗ (ಸಾಗುವಾನಿ), (106) ಬಿಳಿ ದೇವದಾರು (ಕೇದರ), (107) ಸಿಲ್ವರ್ ಓಕ್, (108) ನೀಲಗಿರಿ, (109) ವೀಳ್ಯೆದೆಲೆ, (110) ಬೆಲ್ಲ, (111) ತೆಂಗಿನಕಡ್ಡಿ, (112) ಒಣದ್ರಾಕ್ಷಿ.

**ಅನುಸೂಚಿ**

ತುಮಕೂರು ತಾಲ್ಲೂಕು ಹೆಬ್ಬೂರು ಹೋಬಳಿ, ಹೆಬ್ಬೂರು ಗ್ರಾಮದ ಸರ್ವೆ ನಂ.158 ರಲ್ಲಿನ ಸಮಿತಿಗೆ ಸೇರಿದ 3 ಎಕರೆ ಜಮೀನಿನ ಈ ಕೆಳಗಿನ ಸೀಮಾಬದ್ದ ಸ್ಥಳ:

**ಪೂರ್ವಕ್ಕೆ:** ಸರ್ವೆ ನಂ.130, 131, (ತುಮಕೂರು–ಕುಣಿಗಲ್ ರಸ್ತೆ)

**ಪಶ್ಚಿಮಕ್ಕೆ:** ಸರ್ವೆ ನಂ.158ರ ಉಳಿಕೆ ಜಮೀನು

**ಉತ್ತರಕ್ಕೆ:** ಕೆ.ಎಸ್.ಆರ್.ಟಿ.ಸಿ.ಗೆ ನೀಡಿರುವ ಜಮೀನು

**ದಕ್ಷಿಣಕ್ಕೆ:** ಸರ್ವೆ ನಂ.158ರ ಉಳಿಕೆ ಜಮೀನು.

**ಜಿ. ರಾಮಚಂದ್ರ**

ಪಿ.ಆರ್.1185 ನಿರ್ದೇಶಕರು.

**ಅಧಿಕಾರಿಯುತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳವರ ನ್ಯಾಯಾಲಯ**

**ಮಂಡ್ಯ ವಿಭಾಗ, ಮಂಡ್ಯ**

**ಅರಣ್ಯ ಮೊಕದ್ದಮೆ ಸಂಖ್ಯೆ:158/08–09, ದಿನಾಂಕ:25ನೇ ಜೂನ್, 2010**

**ಉಪಸ್ಥಿತಿ:** ಕೆ.ಹೆಚ್.ವಿನಯ್‌ಕುಮಾರ್, ಭಾ.ಅ.ಸೇ,. ಅಧಿಕಾರಿಯುತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಮಂಡ್ಯ ವಿಭಾಗ, ಮಂಡ್ಯ.

| **ಫಿರ್ಯಾಧಿದಾರರು** | **ವಿರುದ್ಧ** | **ಅರ್ಜಿದಾರರು** |
|---|---|---|
| ರಂಗಸ್ವಾಮಿ,<br>ಆರಕ್ಷಕ ಉಪನಿರೀಕ್ಷಕರು,<br>ಅಪರಾಧ ವಿಭಾಗ ಠಾಣೆ, ಮದ್ದೂರು.<br>**ಫಿರ್ಯಾಧಿದಾರರ ಪರ ವಕೀಲರು**<br>ಶಿವಣ್ಣ,<br>ಸಹಾಯಕ ಸರ್ಕಾರಿ ಅಭಿಯೋಗ ನಿರ್ದೇಶಕರು,<br>ಮಂಡ್ಯ. | | ಎನ್.ಎ.ನಾಗರಾಜ್ ಬಿನ್ ಅಣ್ಣೇಗೌಡ,<br>ನಂ:24, 8ನೇ ಮುಖ್ಯರಸ್ತೆ,<br>ಕಮಲಾನಗರ ಬಡಾವಣೆ,<br>ಯಶವಂತಪುರ, ಬೆಂಗಳೂರು. |

**ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 71ಎ ಮೇರೆಗೆ ಸಂಬಂಧಿಸಿದ ಆದೇಶ.**

**1. ಪ್ರಕರಣದ ಹಿನ್ನೆಲೆ:**

ದಿನಾಂಕ:30/10/2007 ರಂದು ತುಮಕೂರು ಜಿಲ್ಲೆ, ಕುಣಿಗಲ್ ತಾಲ್ಲೂಕು, ಹುಲಿಯೂರುದುರ್ಗ ಆರಕ್ಷಕ ಠಾಣಾಧಿಕಾರಿಗಳಿಗೆ ಬಂದ ಖಚಿತ ವರ್ತಮಾನದ ಮೇರೆಗೆ, ತುಮಕೂರು–ಮದ್ದೂರು ರಸ್ತೆಯ ಪಕ್ಕದಲ್ಲಿನ ದುರ್ಗಾ ಡಾಬದ ಬಳಿ 21 ತೇಗದ ಮರದ ತುಂಡುಗಳನ್ನು ಸಾಗಿಸುತ್ತಿರುವುದನ್ನು ಪತ್ತೆಮಾಡಿ ತೇಗದ ತುಂಡುಗಳನ್ನು ಸಾಗಿಸುತ್ತಿದ್ದ ವಾಹನ ಐಷರ್ ಕ್ಯಾಂಟರ್ ಸಂಖ್ಯೆ:ಟಿ.ಎನ್–32/5727ನ್ನು ಮಾಲುಸಮೇತ ಜಪ್ತಿಮಾಡಿ ಆರೋಪಿಗಳನ್ನು ಬಂಧಿಸಿ, ಠಾಣಾ ಮೊಕದ್ದಮೆ ಸಂಖ್ಯೆ: ಸಿಆರ್ ನಂ:152/2007ರಲ್ಲಿ ಕರ್ನಾಟಕ ಅರಣ್ಯ ಕಾಯ್ದೆ 24, 62 ಮತ್ತು ಕರ್ನಾಟಕ ಅರಣ್ಯ ನಿಯಮ 1963ರ ಸೆಕ್ಷನ್ 144 ಹಾಗೂ ಭಾರತೀಯ ದಂಡ ಸಂಹಿತೆ 379 ಸಹವಾಚಕ 34ರಲ್ಲಿ ಅರಣ್ಯ ಅಪರಾಧ ಪ್ರಕರಣ ನೊಂದಾಯಿಸಿಕೊಂಡು ತನಿಖೆ ಮಾಡಲಾಗಿ ಆರೋಪಿಗಳು ನೀಡಿದ ಹೇಳಿಕೆಯಂತೆ ಮಂಡ್ಯಜಿಲ್ಲೆಯ ಮದ್ದೂರು ಆರಕ್ಷಕ ಠಾಣಾ ವ್ಯಾಪ್ತಿಯ ಪ್ರದೇಶದಲ್ಲಿ ನಡೆದ ಕೃತ್ಯಕ್ಕೆ ಸಂಬಂಧಿಸಿದಾಗಿದ್ದು, ಈ ಅಪರಾಧ ಪ್ರಕರಣವನ್ನು ಹುಲಿಯೂರು ದುರ್ಗ ಠಾಣೆಯಿಂದ ಮದ್ದೂರು ಠಾಣಾ ಅಪರಾಧ ವಿಭಾಗಕ್ಕೆ ದಿನಾಂಕ:12/11/07ರಂದು ವರ್ಗಾಯಿಸಲಾಗಿದೆ.

ಮದ್ದೂರು ಆರಕ್ಷಕ ಠಾಣಾ ಅಪರಾಧ ವಿಭಾಗವು ದೂರನ್ನು ಸ್ವೀಕರಿಸಿ ತಮ್ಮ ಠಾಣೆಯ ಮೊಕದ್ದಮೆ ಸಂಖ್ಯೆ:436/07 ದಿನಾಂಕ:21/11/07ರಂದು ನೊಂದಾಯಿಸಿಕೊಂಡು ವಿಚಾರಣೆ ನಡೆಸಿರುತ್ತಾರೆ. ವಿಚಾರಣೆಯಂತೆ ಮದ್ದೂರು ಠಾಣೆ ವ್ಯಾಪ್ತಿಗೆ ಸೇರಿದ ನಿಡಘಟ್ಟ ಗ್ರಾಮದ ಬಳಿ ಸರ್ವೆ ನಂ:58, 59ರ ಜಮೀನಿನಲ್ಲಿ ಬೆಳೆಸಲಾಗಿದ್ದ 5 ತೇಗದ ಮರಗಳನ್ನು ಅಕ್ರಮವಾಗಿ ಕಡಿದು ತುಂಡು ಮಾಡಿ ಸಾಗಿಸುತ್ತಿದ್ದುದು ಸುಮಾರು 32700/– ರೂ ಬೆಲೆಬಾಳುವ ಮರಗಳೆಂದು ತಿಳಿಸಿದ್ದು, ಮಾನ್ಯ ಮದ್ದೂರು ನ್ಯಾಯಾಲಯಕ್ಕೆ ಮಾಲುಪಟ್ಟಿ ಸಂಖ್ಯೆ:405/07ರಲ್ಲಿ 21/11/07ರಂದು ವಿವರ ಸಲ್ಲಿಸಿ ಸ್ವತ್ತುಗಳನ್ನು ಅರಣ್ಯ ಇಲಾಖೆ ವಶಕ್ಕೆ ನೀಡಲು ಅನುಮತಿ ಪಡೆದಿದ್ದು ಅದರಂತೆ ಐಷರ್ ಕ್ಯಾಂಟರ್ ಸಂಖ್ಯೆ:ಟಿ.ಎನ್–32/5727ನ್ನು ಹಾಗೂ 21 ತೇಗದ ಮರದ ತುಂಡುಗಳು, 2ಗರಗಸ, ಒಂದು ಟಾರ್ಪಲ್‌ನ ಸಮೇತ ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಮಂಡ್ಯ ವಿಭಾಗ, ಮಂಡ್ಯರವರಲ್ಲಿಗೆ ಕರ್ನಾಟಕ ಅರಣ್ಯ ಕಾಯ್ದೆ ಸೆಕ್ಷನ್ 71ಎ ಮೇರೆಗೆ ಕ್ರಮಕೈಗೊಳ್ಳಲು ವರದಿಸಿರುತ್ತಾರೆ. ಮದ್ದೂರು ಆರಕ್ಷಕ ಠಾಣೆ ಮೊಕದ್ದಮೆ ಸಂಖ್ಯೆ:436/07ರ ಮೇರೆಗೆ ಹಾಜರ್‌ಪಡಿಸಲಾದ ಅರಣ್ಯಅಪರಾಧ ಪ್ರಕರಣಕ್ಕೆ ಸಂಬಂಧಿಸಿದ ಸ್ವತ್ತುಗಳನ್ನು ಸ್ವೀಕರಿಸಿ ವಿಭಾಗ ಕಛೇರಿಯ ಅರಣ್ಯ ಮೊಕದ್ದಮೆ ಸಂಖ್ಯೆ:158/08ರಲ್ಲಿ ನೊಂದಾಯಿಸಿಕೊಂಡು ವಿಚಾರಣಾ ಕ್ರಮಕೈಗೊಳ್ಳಲಾಗಿದೆ.

**ಪ್ರಕರಣದ ವಿಚಾರಣಾ ಹಂತ:**

ವಾಹನ ಮಾಲೀಕರು ಯಾರೆಂದು ಪತ್ತೆಹಚ್ಚಲು ಕ್ರಮಕೈಗೊಳ್ಳಲಾಯಿತು. ಪ್ರಾದೇಶಿಕ ಸಾರಿಗೆ ಅಧಿಕಾರಿ, ಬೆಂಗಳೂರು ಉತ್ತರ ವಿಭಾಗ, ಬೆಂಗಳೂರುರವರು ನೀಡಿದ ಫಾರಂ ಕೆಎಂವಿ 45ರಲ್ಲಿ ನೀಡಲಾದ ದಾಖಲಾತಿಯಂತೆ ವಾಹನ ಮಾಲೀಕರು ಎನ್.ಎ.ನಾಗರಾಜು ಬಿನ್ ಅಣ್ಣೇಗೌಡ, ನಂ:24, 8ನೇ ಮುಖ್ಯ ರಸ್ತೆ, ಕಮಲಾನೆಹರು ಬಡಾವಣೆ, ಯಶವಂತಪುರ,

ಬೆಂಗಳೂರು ಇವರಿಗೆ ಸೇರಿದ್ದಾಗಿದೆ ಎಂದು ಧೃಢೀಕರಿಸಿದೆ ಹಾಗೂ ರಾಷ್ಟ್ರೀಯ ಇನ್ಸುರೇನ್ಸ್ ಕಂಪನಿ ಲಿಮಿಟೆಡ್ ಶಿವಾನಂದ ಸರ್ಕಲ್, ಕುಮಾರ ಕೃಪ ರಸ್ತೆ ಬೆಂಗಳೂರುರವರು ಸದರಿ ವಾಹನಕ್ಕೆ ಜೀವನಾ ವಿಮಾ ನೀಡಿರುವ ಪಾಲಿಸಿ ಸಂಖ್ಯೆ:603900/31/06/6700014494 ದಿನಾಂಕ:13/03/2007 ಪತ್ರದ ಆಧಾರದಲ್ಲಿಯೂ ವಾಹನ ಮಾಲೀಕರು ಎ.ಎನ್.ನಾಗರಾಜು ಎಂಬುದು ತಿಳಿದುಬಂದಿರುತ್ತದೆ.

**ವಾಹನ ಮಾಲೀಕರಿಗೆ ನೋಟೀಸ್:**

ಅರಣ್ಯ ಅಪರಾಧದಲ್ಲಿ ಭಾಗಿಯಾದ ವಾಹನ ಟಿಎನ್–32/5727ರ ಐಷರ್ ಕ್ಯಾಂಟರ್ ವಾಹನದ ಮಾಲೀಕರ ವಿಳಾಸಕ್ಕೆ ಕರ್ನಾಟಕ ಅರಣ್ಯ ಕಾಯ್ದೆ 71ಬಿ ಮೇರೆಗೆ ನೊಂದಾಯಿತ ಅಂಚೆ ಮೂಲಕ ನೋಟೀಸ್ ನೀಡಲಾಯಿತು ಹಲವು ಬಾರಿ ನೋಟೀಸ್ ಜಾರಿ ಮಾಡಲಾಯಿತಾದರೂ ಸಹ ಸ್ವೀಕೃತವಾಗದೇ ವಾಪಸ್ ಬಂದಿರುತ್ತವೆ. ವಾಹನ ಮಾಲೀಕರಿಗೆ ಮತ್ತು ವಾಹನಕ್ಕೆ ಸಂಬಂಧಿಸಿದವರಿಗೆ ತಿಳುವಳಿಕೆ ನೀಡುವುದಕ್ಕಾಗಿ ರಾಜ್ಯದ ವಾರ್ತಾ ಇಲಾಖೆ ಮೂಲಕ ದಿನಪತ್ರಿಕೆಗಳಿಗೆ ಪ್ರಕಟಣೆಯನ್ನು ನೀಡಲಾಯಿತು. ಸಾಕಷ್ಟು ಕಾಲಾವಕಾಶ ಕೊಡಲಾಗಿದ್ದರೂ ಸಹ ವಾಹನ ಮಾಲೀಕರಾಗಲೀ ಅಥವಾ ವಾಹನಕ್ಕೆ ಸಂಬಂಧಿಸಿದ ಯಾರೇ ಆಗಲಿ ಹಾಜರಾಗಿ ತಮ್ಮ ಹೇಳಿಕೆಯನ್ನು ನೀಡಿರುವುದಿಲ್ಲ.

**ಸಾಕ್ಷಿಗಳ ವಿಚಾರಣೆ**

ಅರಣ್ಯ ಅಪರಾಧ ಪ್ರಕರಣದ ಸಾಕ್ಷಿಗಳಾಗಿ ಪಿಡಬ್ಲ್ಯು–1, ಪಿಡಬ್ಲ್ಯು–2 ಮತ್ತು ಪಿಡಬ್ಲ್ಯು–5ರವರಿಗೆ ಸಾಕ್ಷಿ ಹೇಳಿಕೆ ನೀಡುವಂತೆ ಸಮನ್ಸ್ ಜಾರಿ ಮಾಡಲಾಗಿದ್ದು, ಪಿಡಬ್ಲ್ಯು–1 ಮತ್ತು ಪಿಡಬ್ಲ್ಯು–2ರ ಸಾಕ್ಷಿಗಳು ಹಲವುಬಾರಿ ಗೈರುಹಾಜರಾಗಿರುತ್ತಾರೆ. ಪಿಡಬ್ಲ್ಯು–5 ಸಾಕ್ಷಿದಾರರು ನ್ಯಾಯಾಲಯದಲ್ಲಿ ಹಾಜರಾಗಿ ತಮ್ಮ ಹೇಳಿಕೆ ನೀಡುತ್ತಾ, ದಿನಾಂಕ:26/12/2007ರಂದು ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಮಂಡ್ಯ ವಿಭಾಗರವರ ಆದೇಶದಂತೆ ಮದ್ದೂರು ಪೋಲಿಸ್ ಠಾಣೆಯ ಮೊಕದ್ದಮೆ ಸಂಖ್ಯೆ:436/07 ಇವರು ವಶಪಡಿಸಿಕೊಂಡಂತಹ ಐಶರ್ ಕ್ಯಾಂಟ್ ವಾಹನ ಹಾಗೂ ತೇಗದ ತುಂಡುಗಳನ್ನು ನನ್ನ ವಶಕ್ಕೆ ಪಡೆದುಕೊಳ್ಳಲು ಉಪ ಅರಣ್ಯ ಸಂರಕ್ಷಣಾಧಿಕಾರಿಗಳು ನೀಡಿದ ಆದೇಶದ ಮೇರೆಗೆ ನಾನು ದಿನಾಂಕ:26/12/2007ರಂದು ಒಂದು ಕ್ಯಾಂಟರ್ ವಾಹನ ಸಂಖ್ಯೆ:ಟಿ.ಎನ್–32 / 5727 ಈ ವಾಹನವನ್ನು ಪರಿಶೀಲಿಸಿ ಅದರ ಸ್ಥಿತಿಯನ್ನು ಯಾವ ಸ್ಥಿತಿಯಲ್ಲಿದೆ ಎಂಬುದನ್ನು ನಮೂದಿಸಿ ಅದರ ಜೊತೆಯಲ್ಲಿದ್ದಂತಹ 21 ತೇಗದ ತುಂಡುಗಳನ್ನು ಪರಿಶೀಲಿಸಿ ಪ್ರತಿಯೊಂದು ತುಂಡಿನ ಉದ್ದ ಮತ್ತು ಅಗಲ ಅಳತೆ ಮಾಡಿ ಅದನ್ನು ನಮೂದಿಸಿ ನನ್ನ ವಶಕ್ಕೆ ಪಡೆದಿರುತ್ತೇನೆ. ಸದರಿ 21 ತೇಗದ ತುಂಡುಗಳು ತೊಗಟೆಯಿಂದ ಕೂಡಿರುತ್ತವೆ. ಅದರ ಮೇಲೆ ಬೇರೆ ಯಾವ ಗುರುತು ಇರುವುದಿಲ್ಲ. ಈ ವಾಹನ ಮತ್ತು ತೇಗದ ತುಂಡುಗಳ ಜೊತೆಯಲ್ಲಿ ಎರಡು ಗರಗಸ ಹಾಗೂ ಒಂದು ಬಿಳಿಯ ಬಣ್ಣದ ಟಾರ್ಪಲ್‌ಗಳನ್ನು ಮೇಲಾಧಿಕಾರಿಗಳ ಆದೇಶದ ಮೇರೆಗೆ ನನ್ನ ಬಳಿ ಮುಂದಿನ ಆದೇಶದವರೆಗೆ ಸಂರಕ್ಷಣೆಯಲ್ಲಿಟ್ಟಿರುತ್ತೇನೆ. ನಾನು ಆರಕ್ಷಕರಿಗೆ ನೀಡಿರುವ ವರದಿಯನ್ನು ನಿಶಾನೆ ಪಿ–1 ಎಂದು ಮತ್ತು ಅದರ ಸಾಕ್ಷಿ ಸಹಿಯನ್ನು ನಿಶಾನೆ ಪಿ–1ಎ ಎಂದು ಗುರುತಿಸಲಾಯಿತು ಮುಂದುವರೆದು ದಿನಾಂಕ:18/06/2010ರಂದು ಸಹಾಯಕ ಅಭಿಯೋಗ ನಿರ್ದೇಶಕರವರ ವಿಚಾರಣೆಗೆ ಉತ್ತರಿಸುತ್ತಾ, ತೇಗದ ಮರದ ತುಂಡುಗಳು ಗರಗಸ ಹಾಗೂ ಕ್ಯಾಂಟರ್ ವಾಹನ ಹಾಗೂ ಟಾರ್ಪಲ್‌ಗಳನ್ನು ಮದ್ದೂರು ಪೋಲಿಸರು ನನ್ನ ಮುಂದೆ ಹಾಜರುಪಡಿಸಿದ ಮೇಲೆ ಹೇಳಿದ ಎಲ್ಲಾ ವಸ್ತುಗಳನ್ನು ನೋಡಿದರೆ ಗುರುತಿಸುತ್ತೇನೆ. ಅವುಗಳು ಈಗ ಅಧಿಕೃತ ಅಧಿಕಾರಿಯವರ ನ್ಯಾಯಾಲಯದ ಮುಂದೆ ಇರುತ್ತವೆ ಎಂದು ತಮ್ಮ ಹೇಳಿಕೆ ನೀಡಿರುತ್ತಾರೆ.

**ಪರಿಶೀಲನಾಂಶಗಳು:**

ಅರಣ್ಯ ಅಪರಾಧ ಪ್ರಕರಣವು ದಿನಾಂಕ:14/08/09ರಿಂದ ವಿವಿಧ ಹಂತಗಳಲ್ಲಿ ವಿಚಾರಣೆ ನಡೆದಿರುತ್ತದೆ ವಾಹನ ಮಾಲೀಕರಾಗಲೀ ಅಥವಾ ವಾಹನಕ್ಕೆ ಸಂಬಂಧಿಸಿದ ಇತರರಾಗಲಿ, ತಾವಾಗಲಿ ಅಥವಾ ತಮ್ಮ ಪರ ವಕೀಲರ ಮೂಲಕವಾಗಿಯಾಗಲೀ ಹಾಜಾರಾಗದೇ ತಟಸ್ಥರಾಗಿದ್ದು ಕಳುಹಿಸಿಕೊಡಲಾದ ನೋಂದಾಯಿತ ನೋಟೀಸ್ ಜಾರಿಯಾಗದೇ ಹಿಂದಿರುಗಿರುತ್ತವೆ. ಪತ್ರಿಕಾ ಪ್ರಕಟಣೆಯ ಮೂಲಕವು ದಿನಪತ್ರಿಕೆಗಳಲ್ಲಿ ಪ್ರಕಟಿಸಲಾಗಿದ್ದರೂ ಸಹ ಯಾರು ಹಾಜರಾಗಿರುವುದಿಲ್ಲ.

ಫಿರ್ಯಾಧಿದಾರರ ಪರವಾದ ಪಿಡಬ್ಲ್ಯು–5ರ ಸಾಕ್ಷಿದಾರರು ನ್ಯಾಯಾಲಯದಲ್ಲಿ ಸಾಕ್ಷಿ ನುಡಿಯುತ್ತಾ, ಜಪ್ತಿ ಮಾಡಲಾದ ವಾಹನ ಗರಗಸ, ಟಾರ್ಪಲಿನ್ ಹಾಗೂ 21 ತೇಗದ ಮರದ ತುಂಡುಗಳನ್ನು ಮುದ್ದೆಮಾಲು ನಿಶಾನೆಯಲ್ಲಿ ಹಾಗೂ ವರದಿಯನ್ನು ನಿಶಾನೆ ಪಿ–1ರಲ್ಲಿ ಗುರುತಿಸಿರುತ್ತಾರೆ.

ಫಿರ್ಯಾಧಿದಾರರ ಪರ ವಕೀಲರಾದ ಸಹಾಯಕ ಅಭಿಯೋಜಕ ನಿರ್ದೇಶಕರು ತಮ್ಮ ವಾದದಲ್ಲಿ ಅರಣ್ಯ ಅಪರಾಧವು ಕರ್ನಾಟಕ ಅರಣ್ಯ ಕಾಯ್ದೆ 24, 62 ಮತ್ತು ಕರ್ನಾಟಕ ಅರಣ್ಯ ನಿಯಮ ಸೆಕ್ಷನ್ 144ರ ಮೇರೆಗೆ ಅಪರಾಧವಾಗಿದ್ದು

ಸ್ವತ್ತುಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ವರದಿಸಿರುತ್ತಾರೆ. ಅಪರಾಧ ಪ್ರಕರಣದ ವಸ್ತುಸ್ಥಿತಿಯ ಪರಿಶೀಲನಾಂಶಗಳನ್ನು ಪರಿಶೀಲಿಸಲಾಗಿ ಈ ಕೆಳಕಂಡ ಅಭಿಪ್ರಾಯಕ್ಕೆ ಬರಲಾಗಿದೆ.

1. ಫಿರ್ಯಾಧಿದಾರರು ಅರಣ್ಯ ಅಪರಾಧ ಪ್ರಕರಣದಲ್ಲಿ ಜಪ್ತಿ ಮಾಡಲಾದ ವಾಹನ ಭಾಗಿಯಾಗಿರುವುದರ ಬಗ್ಗೆ ಸಾಬೀತು ಪಡಿಸಿದ್ದಾರೆಯೇ ?
2. ವಾಹನ ಮಾಲೀಕರಾಗಲೀ ಅಥವಾ ಅದಕ್ಕೆ ಸಂಬಂಧಿಸಿದ ಇತರರಾಗಲೀ ಅಪರಾಧ ಕೃತ್ಯದಲ್ಲಿ ವಾಹನವು ತಮ್ಮ ಗಮನಕ್ಕೆ ಬಾರದೇ ಈ ಕೃತ್ಯದಲ್ಲಿ ಭಾಗಿಯಾಗಿದೆ ಎಂದು ಸಾಭೀತು ಪಡಿಸಿದ್ದಾರೆಯೇ ?
3. ಈ ಅಪರಾಧ ಪ್ರಕರಣದ ಬಗ್ಗೆ ಕೈಗೊಂಡ ತೀರ್ಮಾನ ಏನು ?

ಮೇಲ್ಕಂಡ ಪರಿಶೀಲನಾಂಶಗಳನ್ನು ವಿವರವಾಗಿ ವಿಶ್ಲೇಷಿಸಿದಾಗ ಫಿರ್ಯಾದಿದಾರರ ಪರ ಪಿಡಬ್ಲ್ಯು–5ರ ಸಾಕ್ಷಿಯಲ್ಲಿ ವಾಹನವು ಆರೋಪಪ್ರಕರಣದಲ್ಲಿ ಭಾಗಿಯಾಗಿರುವುದನ್ನು ಸ್ಪಷ್ಟವಾಗಿ ಹೇಳಿರುತ್ತಾರೆ. ಹಾಗೂ ಮಂಡಿಸಲಾದ ದಾಖಲಾತಿಗಳಲ್ಲಿಯೂ ಸಹ ಸಾಬೀತಾಗಿರುತ್ತದೆ.

ವಾಹನ ಮಾಲೀಕರಾಗಲೀ ಅಥವಾ ಇತರ ಬೇರೆ ವ್ಯಕ್ತಿಗಳಿಂದಾಗಲಿ ಯಾವುದೇ ಪ್ರತಿಕ್ರಿಯೆ ಬಂದಿರುವುದಿಲ್ಲ. ಆದ್ದರಿಂದ ಇದೊಂದು ಕಳುವು ಪ್ರಕರಣ ಎಂದು ಭಾವಿಸಲಾಗಿದೆ.

ಈ ಪ್ರಕರಣದ ಬಗ್ಗೆ ಕೈಗೊಂಡ ತೀರ್ಮಾನ ಎಂಬುದಾಗಿರುತ್ತದೆ.

ಈ ಮೇಲಿನ ಅಂಶಗಳಿಂದ ಕಂಡು ಬರುವ ಪರಿಶೀಲನಾಂಶಗಳು

1. ಸಕರಾತ್ಮಕ
2. ನಕರಾತ್ಮಕ
3. ಆದೇಶ, ಏನು ಎಂಬುದಾಗಿರುತ್ತದೆ. ?

**"ಆದೇಶ"**

ಕೆ.ಹೆಚ್.ವಿನಯ್‌ಕುಮಾರ್ ಭಾ.ಅ.ಸೇ., ಅಧಿಕಾರಿಯುತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಮಂಡ್ಯ ವಿಭಾಗ, ಮಂಡ್ಯ ಆದ ನಾನು ಅರಣ್ಯ ಅಪರಾಧ ಕೃತ್ಯದಲ್ಲಿ ಭಾಗಿಯಾಗಿರುವ ಐಷರ್ ಕ್ಯಾಂಟರ್ ವಾಹನ ಸಂಖ್ಯೆ:ಟಿಎನ್–32–5727ರ ವಾಹನವು ಅರಣ್ಯ ಅಪರಾಧ ಪ್ರಕರಣದಲ್ಲಿ ಭಾಗಿಯಾಗಿರುವುದು ದಾಖಲಾತಿಗಳು ಸಾಕ್ಷ್ಯಾಧಾರದ ಹೇಳಿಕೆ ಹಾಗೂ ಗುರುತಿಸಲಾದ ನಿಶಾನೆಗಳಿಂದ ಧೃಢಪಟ್ಟಿದ್ದು ಸದರಿ ವಾಹನ ಹಾಗೂ 21 ತೇಗದ ಮರದ ತುಂಡುಗಳು 2 ಗರಗಸಗಳು ಹಾಗೂ ಒಂದು ಹಳೆಯದಾದ ಟಾರ್ಪಲಿನ್ನು ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 71ಎ ರಿಂದ 71ಜಿ ಮೇರೆಗೆ ದತ್ತವಾದ ಅಧಿಕಾರದಂತೆ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ. ಇಂದಿನಿಂದ 30 ದಿನಗಳ ಕಾಲ ಸದರಿ ಆದೇಶದ ವಿರುದ್ದ ಮೇಲ್ಮನವಿ ಸಲ್ಲಿಸಲು ಕಾಲಾವಕಾಶವಿದ್ದು, ನಂತರದಲ್ಲಿ ಈ ಆದೇಶವು ಜಾರಿಗೆ ಬರುತ್ತದೆ.

ಈ ಆದೇಶವನ್ನು ಇಂದು ದಿನಾಂಕ:25/06/2010ರಂದು ತೆರೆದ ನ್ಯಾಯಾಲಯದಲ್ಲಿ ನ'ನ್ನ ಸಹಿಯೊಂದಿಗೆ ಉದ್ಘೋಷಿಸಿರುತ್ತೇನೆ.

ಅಧಿಕಾರಿಯುತ ಅಧಿಕಾರಿ ಹಾಗೂ,
ಉಪ ಅರಣ್ಯ ಸಂರಕ್ಷಣಾಧಿಕಾರಿ,
ಮಂಡ್ಯ ವಿಭಾಗ, ಮಂಡ್ಯ.

ಪಿ.ಆರ್.1112

**ಅಧಿಕಾರಿಯುತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳವರ ನ್ಯಾಯಾಲಯ**

**ಮಂಡ್ಯ ವಿಭಾಗ, ಮಂಡ್ಯ**

**ಅರಣ್ಯ ಮೊಕದ್ದಮೆ ಸಂಖ್ಯೆ:10/09–10, ದಿನಾಂಕ:25ನೇ ಜೂನ್, 2010**

**ಉಪಸ್ಥಿತಿ:** ಕೆ.ಹೆಚ್.ವಿನಯ್‌ಕುಮಾರ್, ಭಾ.ಅ.ಸೇ,. ಅಧಿಕಾರಿಯುತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಮಂಡ್ಯ ವಿಭಾಗ, ಮಂಡ್ಯ.

| **ಫಿರ್ಯಾಧಿದಾರರು** | **ವಿರುದ್ಧ** | **ಅರ್ಜಿದಾರರು** |
|---|---|---|
| ಕುಮಾರಿ ಎಂ.ಸಿ.ಗೀತಾ, | | ನಂಜುಂಡಯ್ಯ ಬಿನ್ ಬೊಮ್ಮೇಗೌಡ |
| ವಲಯ ಅರಣ್ಯಾಧಿಕಾರಿ, ಮಳವಳ್ಳಿ ವಲಯ, ಮಳವಳ್ಳಿ | | ಪೇಟೆಬೀದಿ, ಮಳವಳ್ಳಿ. |

**ಫಿರ್‍ಯಾಧಿದಾರರ ಪರ ವಕೀಲರು** **ಅರ್ಜಿದಾರರ ಪರ ವಕೀಲರು**

ಶಿವಣ್ಣ, ಮರೀಗೌಡ

ಸಹಾಯಕ ಸರ್ಕಾರಿ ಅಭಿಯೋಗ ನಿರ್ದೇಶಕರು, ಮಂಡ್ಯ ವಕೀಲರು, ಸುಭಾಷ್‌ನಗರ, ಮಂಡ್ಯ.

**ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 71ಎ ಮೇರೆಗೆ**

**1. ಪ್ರಸ್ತಾವನೆ:**

ದಿನಾಂಕ:23/05/2009 ರಂದು ಮಳವಳ್ಳಿ ವಲಯ ಅರಣ್ಯ ಸಿಬ್ಬಂದಿಗಳು ಬಸವನಬೆಟ್ಟ ಮನ್ನಾಜಂಗಲ್ ಅರಣ್ಯ ಪ್ರದೇಶದಲ್ಲಿ ಗಸ್ತು ನಿರ್ವಹಿಸುತ್ತಿರುವಾಗ ಗಾಣಾಳುಗುಡ್ಡ, ಅಂಕಣ್ಣನಒಡ್ಡು ಪ್ರದೇಶದಲ್ಲಿ ಒಂದು ವಾಹನ ನಿಂತಿರುವುದು ಕಂಡು ಅಜಮಾಯಿಸಿ ನೋಡಲಾಗಿ ಸದರಿ ವಾಹನ 407 ಸರಕು ಸಾಗಾಣಿಕೆ ವಾಹನವಾಗಿದ್ದು ಸಂಖ್ಯೆ: ಕೆ.ಎಲ್–11 ಎಫ್–9117 ವಾಹನವು ಅಕ್ರಮವಾಗಿ ಬಸವನಬೆಟ್ಟ ಕಾಯ್ದಿಟ್ಟ ಅರಣ್ಯ ಪ್ರದೇಶದಿಂದ ಕಗ್ಗಲಿ, ಚುಜ್ಜಲಿ, ಮತ್ತು ವಿವಿಧ ಕಾಡುಜಾತಿಯ ಮರಗಳನ್ನು ಕಡಿದು ಸೌದೆಯನ್ನಾಗಿ ಪರಿವರ್ತಿಸಿ ತುಂಬುತ್ತಿದ್ದುದನ್ನು ಪತ್ತೆಮಾಡಿ ಸ್ಥಳ ಮಹಜರ್ ನಡೆಸಿ ಸದರಿ ವಾಹನವನ್ನು ಅಮಾನತ್ತು ಪಡಿಸಿ ಇಬ್ಬರು ಆರೋಪಿಗಳನ್ನು ದಸ್ತಗಿರಿ ಮಾಡಿ ಉಳಿದ ಆರೋಪಿಗಳು ತಲೆಮರೆಸಿಕೊಂಡಿರುತ್ತಾರೆ. ವಲಯ ಅರಣ್ಯಾಧಿಕಾರಿ ಮಳವಳ್ಳಿ ವಲಯರವರು ಅರಣ್ಯ ಅಪರಾಧ ಸಂಖ್ಯೆ 6/09–10 ದಿ:23/05/2009 ರಲ್ಲಿ ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 24,62 ಮತ್ತು 71ಎ ಪ್ರಕಾರ ಪ್ರಕರಣ ನೊಂದಾಯಿಸಿಕೊಂಡು ಸೆಕ್ಷನ್ 71ಎ ಮೇರೆಗೆ ಕ್ರಮಕೈಗೊಳ್ಳಲು ಸ್ವತ್ತು ಸಮೇತ ಹಾಜರ್ಪಡಿಸಿರುತ್ತಾರೆ.

ವಲಯ ಅರಣ್ಯಾಧಿಕಾರಿ, ಮಳವಳ್ಳಿ ವಲಯರವರು ಪ್ರಥಮ ವರ್ತಮಾನ ವರದಿ ಮತ್ತು ಅಗತ್ಯದಾಖಲೆಗಳೊಂದಿಗೆ ಅಕ್ರಮವಾಗಿ ಸೌದೆ ಕಡಿದು ಸಾಗಿಸುತ್ತಿದ್ದ ಸರಕು ಸಾಗಾಣಿಕೆ ವಾಹನ ವಾಹನ ಸಂಖ್ಯೆ: ಕೆ.ಎಲ್–11 ಎಫ್–9117ನ್ನು ಮಾಲು ಸಮೇತ ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಮಂಡ್ಯ ವಿಭಾಗ, ಮಂಡ್ಯರವರ ಮುಂದೆ ಹಾಜರ್‌ಪಡಿಸಿ ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 71ಎ ಮೇರೆಗೆ ಕ್ರಮಕೈಗೊಳ್ಳಲು ವರದಿಸುತ್ತಾ, ವಾಹನ ಮತ್ತು ಸೌದೆಯನ್ನು ವಲಯ ಅರಣ್ಯಾಧಿಕಾರಿಗಳು, ಮಂಡ್ಯ ವಲಯರವರ ವಶದಲ್ಲಿ ಸಂರಕ್ಷಣೆಯಲ್ಲಿಡಲು ಆದೇಶಿಸಿದೆ.

**2. ಅರ್ಜಿದಾರರ ಅರ್ಜಿ ಸಲ್ಲಿಕೆ:**

ಅಪರಾಧ ಪ್ರಕರಣದಲ್ಲಿ ಭಾಗಿಯಾದ ವಾಹನದ ಮಾಲೀಕರಾದ ನಂಜುಂಡ ಬಿನ್ ಬೊಮ್ಮೇಗೌಡ, ಮಳವಳ್ಳಿ ಪೇಟೆ, ಮಳವಳ್ಳಿರವರು ತಮ್ಮ ವಕೀಲರ ಮೂಲಕ ದಿನಾಂಕ:29/05/2009ರಂದು ಅರ್ಜಿ ಸಲ್ಲಿಸಿ ಅಮಾನತ್ತು ಪಡಿಸಿಕೊಂಡಿರುವ ಸರಕು ಸಾಗಾಣಿಕೆ ವಾಹನ ಸಂಖ್ಯೆ: ಕೆ.ಎಲ್–11 ಎಫ್–9117ನ್ನು ಮಧ್ಯಕಾಲೀನ ವಶಕ್ಕೆ ಬಿಡುಗಡೆ ಮಾಡಿಕೊಡಲು ಕೋರಿರುತ್ತಾರೆ.

**3. ಸಹಾಯಕ ಅಭಿಯೋಗ ನಿರ್ದೇಶಕರ ತಕರಾರು.**

ದಿ:04/06/2009 ರಂದು ಅರಣ್ಯ ಅಪರಾಧ ವಾಸ್ತವಾಂಶಗಳ ಬಗ್ಗೆ ಸರ್ಕಾರಿ ಸಹಾಯಕ ಅಭಿಯೋಜಕ ನಿರ್ದೇಶಕರು, ಮಂಡ್ಯರವರಲ್ಲಿ ಅರ್ಜಿದಾರರಿಗೆ ವಾಹನವನ್ನು ಮಧ್ಯಕಾಲೀನ ವಶಕ್ಕೆ ಬಿಡುಗಡೆ ಮಾಡುವ ಸಂಬಂಧ ಅಭಿಪ್ರಾಯ ಕೇಳಲಾಗಿ ದಿನಾಂಕ:08/06/2009 ರಂದು ತಮ್ಮ ತಕರಾರನ್ನು ಸಲ್ಲಿಸಿರುತ್ತಾರೆ. ಅರ್ಜಿದಾರರು ಯಾವ ಉದ್ದೇಶಕ್ಕಾಗಿ ಆರೋಪಿಗಳಿಗೆ ವಾಹನವನ್ನು ವಹಿಸಿದ್ದರು ಎನ್ನುವ ಬಗ್ಗೆ ನಿಖರವಾದ ಮಾಹಿತಿ ನೀಡಿರುವುದಿಲ್ಲ. ಅಲ್ಲದೇ ಅರ್ಜಿದಾರರು ಅರಣ್ಯ ಅಪರಾಧದಲ್ಲಿ ಶಾಮೀಲಾಗಿರುವುದು ತಿಳಿದು ಬರುತ್ತದೆ. ವಾಹನವನ್ನು ಮಧ್ಯಂತರ ಸ್ವಾಧೀನಕ್ಕೆ ನೀಡಿದಲ್ಲಿ ಆರೋಪಿತರು ಇದೇ ರೀತಿಯ ಅಕ್ರಮಕ್ಕೆ ಉಪಯೋಗಿಸುವ ಸಾಧ್ಯತೆ ಇರುವುದರಿಂದ ಅರ್ಜಿದಾರರ ಕೋರಿಕೆಯನ್ನು ಮಾನ್ಯ ಮಾಡಲಾಗದು, ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವ ವಿಚಾರದಲ್ಲಿ ನ್ಯಾಯಾಲಯದಲ್ಲಿ ವಿಚಾರಣೆಯಾಗಬೇಕಾಗಿರುವುದರಿಂದ ಹಾಗೂ ಸಾಕ್ಷಿಗಳು ವಾಹನವನ್ನು ವಿಚಾರಣೆಯ ಸಮಯದಲ್ಲಿ ಗುರ್ತಿಸಬೇಕಾಗಿರುವುದರಿಂದ ಮತ್ತು ಅರ್ಜಿದಾರರು ವಾಹನವನ್ನು ಉಪಯೋಗಿಸಿ ಹಾಳು ಮಾಡುವ ಸಂಭವವಿರುವುದರಿಂದ ಅರ್ಜಿದಾರರ ಸ್ವಾಧೀನಕ್ಕೆ ಕೊಡುವುದು ಸೂಕ್ತವಾದುದಲ್ಲ. ಈ ಪ್ರಕರಣದಲ್ಲಿ ವಿಚಾರಣೆ ನಡೆಸಿ ನ್ಯಾಯಾಲಯದಿಂದ ಅಂತಿಮ ಆದೇಶ ನೀಡುವವರೆವಿಗೂ ಅಧಿಕಾರಿಯುತ ಅಧಿಕಾರಿಯವರ ಸ್ವಾಧೀನದಲ್ಲಿ ಇಟ್ಟುಕೊಳ್ಳುವುದು ಸೂಕ್ತವೆಂದು ತಕರಾರು ಸಲ್ಲಿಸಿರುತ್ತಾರೆ.

**4. ಮಧ್ಯಕಾಲೀನ ವಶಕ್ಕೆ ಬಿಡುಗಡೆ ಸಂಬಂಧ:**

ಫಿರ್ಯಾದಿದಾರರ ಪರವಾದ ಸಹಾಯಕ ಅಭಿಯೋಜಕ ನಿರ್ದೇಶಕರ ಆಕ್ಷೇಪಣೆ ಮತ್ತು ವಾದ ಮಂಡನೆ ಹಾಗೂ ಅರ್ಜಿದಾರರ ಪರವಾದ ವಕೀಲರ ವಾದಮಂಡನೆಯನ್ನು ಆಲಿಸಲಾಯಿತು. ಅರ್ಜಿದಾರರು ಮಧ್ಯಕಾಲೀನ ವಶಕ್ಕೆ ವಾಹನ ಬಿಡುಗಡೆ ಕೋರಿ ಷರತ್ತುಗಳಿಗೆ ಬದ್ಧರಾಗಿರುತ್ತೇವೆಂದು ತಿಳಿಸಿರುವುದನ್ನು ಒಪ್ಪಬಹುದಾಗಿದ್ದರೂ, ಸಹಾಯಕ ಸರ್ಕಾರಿ ಅಭಿಯೋಜಕರ ಮತ್ತೊಂದು ವಾದ ಪ್ರಕರಣದಲ್ಲಿ ಪ್ರಕರಣವು ತನಿಖಾ ಹಂತದಲ್ಲಿರುವುದರಿಂದ ತನಿಖೆಗೆ ತೊಡಕಾಗುತ್ತದೆ ಎಂಬ ಅಂಶವನ್ನು ಗಮನಿಸಬೇಕಾಗುತ್ತದೆ. ಭಾರತ ದೇಶದ ಸರ್ವೋಚ್ಚ ನ್ಯಾಯಾಲಯವು ದಿನಾಂಕ:17/08/2000ರ ಅಸಲು ದಾವೆ ಸಂಖ್ಯೆ 668/2000ರ ತೀರ್ಪಿನ ಪ್ರಕಾರ ಅರಣ್ಯ ಅಪರಾಧದಲ್ಲಿ ಬಳಕೆಯಾದ ವಾಹನವನ್ನು ಮಧ್ಯಕಾಲೀನ ವಶಕ್ಕೆ ಬಿಟ್ಟುಕೊಡಬಾರದೆಂದು ಒಂದು ವೇಳೆ ಬಿಟ್ಟುಕೊಡಲು ವಿಶೇಷ ಕಾರಣಗಳಿದ್ದಲ್ಲಿ ವಾಹನ ಮಾಲೀಕರು ಯಾವುದೇ ವಿಶೇಷವಾದ ಹಾಗೂ ಗುರುತರವಾದ ಕಾರಣಗಳನ್ನು ನೀಡಿರುವುದಿಲ್ಲ. ಆದ್ದರಿಂದ ಈ ಆದೇಶವನ್ನು ಈ ಪ್ರಕರಣಕ್ಕೂ ಅನ್ವಯಿಸುತ್ತಾ, ಮಧ್ಯಕಾಲೀನ ವಶಕ್ಕೆ ವಾಹನ ಬಿಡುಗಡೆ ಮಾಡಲು ಕೋರಿರುವುದನ್ನು ದಿನಾಂಕ:03/07/2009ರಂದು ತಿರಸ್ಕರಿಸಿದೆ.

**5. ವಿಚಾರಣಾ ಹಂತ**

ಅರಣ್ಯ ಅಪರಾಧ ಪ್ರಕರಣವನ್ನು ಶೀಘ್ರಗತಿಯಲ್ಲಿ ವಿಚಾರಣೆ ನಡೆಸಲು ಕ್ರಮಕೈಗೊಂಡು ಸಾಕ್ಷಿಗಳ ವಿಚಾರಣೆ ನಡೆಸಲಾಯಿತು. ಪ್ರಾಸುಕ್ಯೂಷನ್ ಪರ ಪಿಡಬ್ಲ್ಯು–1 ರಲ್ಲಿ ಫಿರ್ಯಾಧಿದಾರರು ಹಾಗೂ ವಿಚಾರಣಾಧಿಕಾರಿಯು ಆದ ಕು॥ ಎಂ.ಸಿ.ಗೀತಾ, ವಲಯ ಅರಣ್ಯಾಧಿಕಾರಿ, ಮಳವಳ್ಳಿ ವಲಯರವರು ಸಾಕ್ಷಿ ನುಡಿಯುತ್ತಾ, ದಿನಾಂಕ 23/05/09 ರಂದು ನನಗೆ ಬಂದ ಖಚಿತ ವರ್ತಮಾನದ ಮೇರೆಗೆ ಹಲಗೂರು ಶಾಖೆಯ ವನಪಾಲಕರಾದ ದೇವರಾಜು ಇವರಿಗೆ ದೂರವಾಣಿಯಲ್ಲಿ ವಿಷಯ ತಿಳಿಸಿ ಮುಳ್ಳಯ್ಯನಕಟ್ಟೆ ಪ್ರದೇಶದಲ್ಲಿ ಇರಲು ತಿಳಿಸಿದ್ದು ನಂತರ ನಾನು ಮತ್ತು ಜಯರಾಮ್ ಅರಣ್ಯ ವೀಕ್ಷಕ, ಇವರ ಸಂಗಡ ವನಪಾಲಕರು ಮತ್ತು ಸಿಬ್ಬಂದಿಗಳು ಇದ್ದ ಸ್ಥಳಕ್ಕೆ ಹೋದೆನು. ನಂತರ ನಾನು ಮತ್ತು ಸಿಬ್ಬಂದಿಯೊಂದಿಗೆ ಗಾಣಾಳುಗುಡ್ಡ ಅರಣ್ಯದ ಅಂಕಣ್ಣನಹೊಡ್ಡು ಪ್ರದೇಶಕ್ಕೆ ಗಸ್ತು ಮಾಡಿಕೊಂಡು ಹೋಗುವಾಗ ಸುಮಾರು ಅರ್ಧ ಫರ್ಲಾಂಗು ದೂರದಲ್ಲಿ ವಾಹನ ಸಂಖ್ಯೆ:ಕೆಎಲ್–11 ಎಫ್–9117 ಟಾಟ 407 ಸದರಿ ವಾಹನವನ್ನು ಪರಿಶೀಲಿಸಲಾಗಿ ಅದರಲ್ಲಿ ಕಗ್ಗಲಿ, ಚುಜ್ಜಲಿ ಹಾಗೂ ಇತರೆ ಜಾತಿಯ ಕಾಡುಮರಗಳನ್ನು ಕಡಿದು ತುಂಬಿದುದು ಕಂಡು ಬಂದಿದ್ದು ಇವೆಲ್ಲವು ಕಡಿದ ಹಸಿ ಮರಗಳಾಗಿದ್ದವು. ಸದರಿ ವಾಹನದ ಹತ್ತಿರ ಪರಿಶೀಲಿಸಿ ನೋಡಲಾಗಿ ವಾಹನದ ಹತ್ತಿರ ಯಾರು ಇರುವುದಿಲ್ಲ. ಅಲ್ಲೇ ಪಕ್ಕದಲ್ಲಿ ಸುಮಾರು ನೂರು ಅಡಿ ದೂರದಲ್ಲಿ ಪುನಃ ಮರಗಳನ್ನು ತಂದು ವಾಹನದ ಹತ್ತಿರ ಹಾಕಲು ಪ್ರಯತ್ನಿಸುತ್ತಿದ್ದರು. ನಮ್ಮ ಸಿಬ್ಬಂದಿಯವರನ್ನು ನೋಡಿದ ತಕ್ಷಣ ಸ್ಥಳದಿಂದ ಓಡಿ ಹೋದರು. ಅದರಲ್ಲಿ ಓಡಿಹೋದವನಲ್ಲಿ ಒಬ್ಬನ ಹೆಸರು ಲೋಕೇಶ, ಇನ್ನೊಬ್ಬನ ಹೆಸರು ಕುರಿಮಾದಯ್ಯ. ನಂತರ ಮರಗಳನ್ನು ಕತ್ತರಿಸಿದ ಬುಡಗಳಿಗೆ ಇಲಾಖಾ ಮೊಹರನ್ನು ಹಾಕಿರುತ್ತೇನೆ. ಆ ಮರದ ಬುಡದ ಅಳತೆ ಮಾಡಲಾಗಿರುತ್ತದೆ. ಟಾಟ ಕ್ಯಾಂಟರ್‌ನಲ್ಲಿ ತುಂಬಿದ್ದ ಮರಗಳು ಸದರಿ 50 ಮರಗಳನ್ನು ಕಡಿದಿರುವ ಬುಡಗಳು ಕಂಡುಬಂದಿದೆ. ವಾಹನದಲ್ಲಿ ತುಂಬಿದ ಸೌದೆ ಸುಮಾರು 3–4 ಟನ್ ಆಗಿರುತ್ತದೆ. ಸ್ಥಳದಲ್ಲಿ ಮಹಜರ್ ಅನ್ನು ಬರೆಯಲಾಗಿರುತ್ತದೆ. ದೇವರಾಜು ವನಪಾಲಕರು ಇವರು ಬರೆದಿರುತ್ತಾರೆ, ಮಹಜರ್‌ಗೆ ಅರಣ್ಯ ರಕ್ಷಕ'ರಾದ ಅದರ್ಶಗೌಡರವರು ಸಹಿಮಾಡಿರುತ್ತಾರೆ. ಮಾದೇಗೌಡ, ಜಯರಾಮು, ಮಾದನಾಯಕ ಇವರು ಸಹ ಸಹಿ ಮಾಡಿರುತ್ತಾರೆ, ನಂತರ ವಲಯ ಅರಣ್ಯ ಕಛೇರಿಗೆ ತೆಗೆದುಕೊಂಡು ಹೋಗಿರುತ್ತೇನೆ. ನಂತರ ಮೊಕದ್ದಮೆಯನ್ನು ಮುಂದುವರೆಸಲಾಗಿರುತ್ತದೆ. ಪ್ರಥಮ ವರ್ತಮಾನದ ವರದಿಯನ್ನು ಮಳವಳ್ಳಿ ಸಿವಿಲ್ ಜಡ್ಜ್ ಕಿರಿಯ ವಿಭಾಗ ಮತ್ತು ಜೆಎಂಎಫ್‌ಸಿ ನ್ಯಾಯಾಲಯಕ್ಕೆ ಸಲ್ಲಿಸಿರುತ್ತೇನೆ ಎಂದು ನುಡಿದಿರುತ್ತಾರೆ.

ಸಾಕ್ಷಿದಾರರಾದ ಪಿಡಬ್ಲ್ಯು–1ರವರ ವರ್ಗಾವಣೆ ನಿಮಿತ್ತ ಪಾಟೀ ಸವಾಲಿಗೆ ಹಾಜರಾಗಲು ಹಲವಾರು ಬಾರಿ ತಿಳಿಸಿದಾಗ್ಯೂ ಸಹ ವಿಚಾರಣೆಗೆ ಹಾಜರಾಗಿರುವುದಿಲ್ಲ.

ಪ್ರಾಸಿಕ್ಯೂಷನ್ ಪರ ಪಿಡಬ್ಲ್ಯು–2 ಸಾಕ್ಷಿ ನುಡಿಯುತ್ತಾ, ದಿನಾಂಕ:23/05/09 ರಂದು ಬೆಳಿಗ್ಗೆ 08:30 ಗಂಟೆಯಲ್ಲಿ ತಾಳವಾಡಿ ಗಸ್ತಿನ ಗಾಣಾಳು ಗುಡ್ಡ ಅರಣ್ಯ ಪ್ರದೇಶದಲ್ಲಿ ಗಸ್ತಿನಲ್ಲಿದ್ದೆನು. ಆದಿನ ವಲಯ ಅರಣ್ಯಾಧಿಕಾರಿಯವರು ದೂರವಾಣಿ ಮುಖಾಂತರ ಮುಳ್ಳಯ್ಯನ ಕಟ್ಟಯ ಬಳಿ ಬರಲು ತಿಳಿಸಿದರು. ಅದರಂತೆ ನಾನು ಹಾಗೂ ಅದರ್ಶಗೌಡ ಅರಣ್ಯ ರಕ್ಷಕ, ಮಾದನಾಯಕ ವಾಚರ್, ಜಿ.ಕೆ.ಮಾದೇಗೌಡ, ವಾಚರ್, ಇವರೊಂದಿಗೆ ಕಾದಿದ್ದೆನು. ಅದೇ ಸ್ಥಳಕ್ಕೆ ವಲಯ ಅರಣ್ಯಾಧಿಕಾರಿಗಳು ಸಹ ಬಂದರು ನಂತರ ನಮ್ಮ ವಲಯ ಅರಣ್ಯಾಧಿಕಾರಿಯವರು ಬಸವನಬೆಟ್ಟ ಮನ್ನಾ ಜಂಗಲ್ ಗಾಣಾಳು ಗುಡ್ಡ ಅರಣ್ಯ

ಪ್ರದೇಶದಲ್ಲಿ ಅಕ್ರಮವಾಗಿ ಮರಗಳನ್ನು ಕಡಿದು ಸಾಗಿಸಲಾಗುತ್ತಿದೆ ಎಂದು ಆ ಸ್ಥಳಕ್ಕೆ ತಮ್ಮನ್ನು ಸಹ ಕರೆದುಕೊಂಡು ಹೋದರು ಸುಮಾರು 100 ಮೀಟರ್ ದೂರದಿಂದ ಒಂದು ಕ್ಯಾಂಟರ್ ವಾಹನ ನಿಂತಿದ್ದನ್ನು ನೋಡಲಾಯಿತು. ನಾವು ವಾಹನದ ಹತ್ತಿರ ಹೋದಾಗ ಮರಗಳನ್ನು ತುಂಬುತ್ತಿದ್ದವರು ನಮ್ಮನ್ನು ನೋಡಿ ಓಡಿ ಹೋದರು. ಅವರಲ್ಲಿ ಇಬ್ಬರನ್ನು ನಾನು ಗುರುತಿಸುತ್ತೇನೆ. ಅದರಲ್ಲಿ ಒಬ್ಬ ವಾಹನ ಚಾಲಕ ಲೋಕಿ ಬಿನ್ ಜಯಣ್ಣ, ಮಳವಳ್ಳಿ ಪೇಟೆ ಬೀದಿ ವಾಸಿ, ಮತ್ತೊಬ್ಬ ಮಾದಯ್ಯ ಬಿನ್ ಕುರಿಮಾದಯ್ಯ ಗಾಣಾಳು ಗ್ರಾಮದ ವಾಸಿಯಾಗಿರುತ್ತಾರೆ. ನಂತರ ಅಲ್ಲಿನ ಅರಣ್ಯ ಪ್ರದೇಶವನ್ನು ಪರಿಶೀಲಿಸಲಾಗಿ ಚುಜ್ಜಲಿ, ಕಗ್ಗಲಿ, ಸೀಮೆತಂಗಡಿ ಮತ್ತು ವಿವಿಧ ಜಾತಿಯ ಮರಗಳನ್ನು ಕತ್ತರಿಸಿರುವುದು ಕಂಡು ಬಂದಿತು. ಸುಮಾರು 50 ವಿವಿಧ ಜಾತಿಯ ಮರಗಳನ್ನು ಕಡಿದಿದ್ದು ಅದರ ಮೇಲೆ ಇಲಾಖಾ ಮೊಹರನ್ನು ಹಾಕಲಾಗಿರುತ್ತದೆ. ನಂತರ ಸ್ಥಳದಲ್ಲಿ ನಮ್ಮ ವಲಯ ಅರಣ್ಯಾಧಿಕಾರಿಗಳ ಸಮಕ್ಷಮ ಮಹಜರ್ ನಡೆಸಿದ್ದು ನಂತರ ಮಹಜರ್‌ಅನ್ನು ನಾನೇ ಬರೆದಿರುತ್ತೇನೆ ಮಹಜರ್‌ನ‌ಲ್ಲಿರುವ ಸಹಿಯನ್ನು ಗುರುತಿಸಿರುತ್ತೇನೆ. ಮಹಜರ್‌ಅನ್ನು ಈಗಾಗಲೇ ಪಿ 1ಎ ಎಂದು ಗುರುತಿಸಲಾಗಿದು ಸಾಕ್ಷಿ ಸಹಿಯನ್ನು ಪಿ 1ಬಿ ಎಂದು ಗುರುತಿಸಲಾಗಿದೆ. ಮರಗಳನ್ನು ತುಂಬಿದ ವಾಹನ ಸಂಖ್ಯೆ ಕೆ.ಎಲ್–11 ಎಫ್–9117 ವಾಹನವನ್ನು ನೋಡಿ ಗುರುತಿಸಿದ್ದಾರೆ. ವಾಹನವನು ಮತ್ತು ಅಮಾನತ್ತು ಪಡಿಸಿರುವ ಮರಗಳನ್ನು ಅವುಗಳನ್ನು ನೋಡಿದರೆ ಎಂ‌ಒ1 2 ರಿಂದ 50 ಎಂದು ಗುರುತಿಸಲಾಗಿರುತ್ತದೆ. ಆರೋಪಿಗಳನ್ನು ನೋಡಿದರೆ ಅವರುಗಳನ್ನು ಗುರುತಿಸುತ್ತೇನೆ. ನಂತರ ಮರಗಳ ಸಮೇತ ವಾಹನವನ್ನು ನಮ್ಮ ವಲಯ ಅರಣ್ಯಾಧಿಕಾರಿಗಳ ಕಛೇರಿಗೆ ತೆಗೆದುಕೊಂಡು ಹೋಗಲಾಯಿತು.

ಅರ್ಜಿದಾರರ ಪರವಾದ ಪಾಟೀ ಸವಾಲಿಗೆ ಉತ್ತರಿಸುತ್ತಾ,

ನಾವು ನೇರಳೆಮರದ ಗುಂಡಿ ಬಳಿ ಗಸ್ತು ಮಾಡುತ್ತಿದ್ದಾಗ ವಲಯ ಅರಣ್ಯಾಧಿಕಾರಿಯವರಿಂದ ದೂರವಾಣಿ ಸಂದೇಶ ಬಂದಾಗ ಸದರಿ ಸ್ಥಳಕ್ಕೆ ಬೇಟಿ ಕೊಟ್ಟೆವು ವಲಯ ಅರಣ್ಯ ಕಛೇರಿಯಿಂದ ಸದರಿ ಪ್ರದೇಶವು 25 ರಿಂದ 26 ಕಿಮೀ ದೂರವಿದೆ. ನಾವು ಗಸ್ತು ಮಾಡುತ್ತಿದ್ದ ಪ್ರದೇಶ ಅರಣ್ಯ ಪ್ರದೇಶವಾಗಿರುತ್ತದೆ. ನನ್ನ ಬಳಿ ಸ್ಥಿರ ದೂರವಾಣಿ ಇರಲಿಲ್ಲ ಮೊಬೈಲ್ ದೂರವಾಣಿ ಇತ್ತು. ನನಗೆ ಸ್ಥಿರ ಮತ್ತು ಚರ ದೂರವಾಣಿಯಲ್ಲಿ ವ್ಯತ್ಯಾಸ ಗೊತ್ತು. ನನ್ನ ಬಳಿ ಇರುವ ಮೊಬೈಲ್ ನನ್ನ ಸ್ವಂತ ಮೊಬೈಲಾಗಿರುತ್ತದೆ. ನಮ್ಮ ವಲಯ ಅರಣ್ಯಾಧಿಕಾರಿಯವರ ಮೊಬೈಲ್ ಸಂಖ್ಯೆ ನನಗೆ ಬಾಯಲ್ಲಿ ನೆನಪಿರುವುದಿಲ್ಲ ಅದು ನನ್ನ ಮೊಬೈಲ್‌ನಲ್ಲಿ ಉಳಿದಿರುತ್ತದೆ. ನಮ್ಮ ವಲಯ ಅರಣ್ಯಾಧಿಕಾರಿಯವರ ಬಳಿ ನನ್ನ ಮೊಬೈಲ್ ಸಂಖ್ಯೆ ಇರುತ್ತದೆ. ಸದರಿ ದೂರವಾಣಿ ಕರೆ ಬಂದಾಗ ನನ್ನ ಜೊತೆ ಆದರ್ಶಗೌಡ, ಮಾದಿನಾಯ್ಕ ಹಾಗೂ ಮಾದೇಗೌಡ ಇದ್ದರು. ನನಗೆ ಕರ್ತವ್ಯ ನಿರ್ವಹಿಸುವಂತಹ ಸ್ವಂತ ಕಛೇರಿ ಇರುವುದಿಲ್ಲ. ನಾವು ಅರಣ್ಯ ಪ್ರದೇಶಕ್ಕೆ ಹೋದಾಗ ಬೆಳಿಗ್ಗೆ ಸುಮಾರು 9:00 ಗಂಟೆಗೆ ಹೋಗಿದ್ದೆವು ನಾವು ನಾಲ್ಕು ಜನ ಭೇಟಿಯಾದ ಸ್ಥಳ ಹೊಸದೊಡ್ಡಿ ಗ್ರಾಮವಾಗಿರುತ್ತದೆ. ಈ ಕೇಸಿನ ಪ್ರಕರಣದ ಜೆರಾಕ್ಸ್ ಪ್ರತಿಗಳು ನನ್ನ ಬಳಿ ಈಗ ಇರುತ್ತದೆ. ಗಾಣಾಳುಗುಡ್ಡ ಅರಣ್ಯ ಪ್ರದೇಶಕ್ಕೆ ಹತ್ತಿರವಾದ ಪ್ರದೇಶ ಗಾಣಾಳು ಗ್ರಾಮ ಅದು ಒಂದು ಕಿಮೀ ದೂರದಲ್ಲಿರುತ್ತದೆ. ಗಾಣಾಳುಗುಡ್ಡ ಅರಣ್ಯಪ್ರದೇಶಕ್ಕೆ ಹೋಗಲು ಗಾಣಾಳು ಗ್ರಾಮದಿಂದ ರಸ್ತೆ ಸಂಪರ್ಕವಿರುತ್ತದೆ. ನೇರಳೆಮರ ಮತ್ತು ಗಾಣಾಳುಗುಡ್ಡ ಅರಣ್ಯಪ್ರದೇಶಕ್ಕೆ ಒಂದು ಕಿಮೀ ದೂರ ಇರುತ್ತದೆ. ನಮಗೆ ಮಾಹಿತಿ ಬಂದಾಗ ಸಮಯ ಮಧ್ಯಾಹ್ನ 3:45 ಆಗಿರುತ್ತದೆ. ನಮಗೆ ಮಾಹಿತಿ ತಿಳಿದು ಬಂದಾಗ ವಲಯ ಅರಣ್ಯಾಧಿಕಾರಿಗಳು ಎಲ್ಲಿದ್ದರೂ ಎಂಬುದು ನನಗೆ ಗೊತ್ತಿಲ್ಲ. ಘಟನಾ ಸ್ಥಳಕ್ಕೆ ನಾವು ಮತ್ತು ವಲಯ ಅರಣ್ಯಾಧಿಕಾರಿಯವರು ಒಟ್ಟಿಗೆ ಬಂದೆವು. ಮುಳ್ಳಯನ್ನಕಟ್ಟೆ ಕೂಡ ಅರಣ್ಯಪ್ರದೇಶವಾಗಿರುತ್ತದೆ. ನಮ್ಮ ವಲಯ ಅರಣ್ಯಾಧಿಕಾರಿಯವರ ಜೊತೆಯಲ್ಲಿ ಅರಣ್ಯ ವೀಕ್ಷಕರಾದ ಜಯರಾಮ್‌ರವರು ಬಂದಿರುತ್ತಾರೆ. ವಲಯ ಅರಣ್ಯಾಧಿಕಾರಿಯವರು ಘಟನಾ ಸ್ಥಳಕ್ಕೆ ಅರಣ್ಯ ವೀಕ್ಷಕ ಜಯರಾಮ್‌ರವರ ಜೊತೆಯಲ್ಲಿ ಮೋಟಾರ್ ಬೈಕ್‌ನಲ್ಲಿ ಬಂದಿರುತ್ತಾರೆ. ಸದರಿ ವಾಹನ ನಿಂತಿದ್ದ ಪ್ರದೇಶದ ಅಕ್ಕಪಕ್ಕ ಕುರುಚಲು ಗಿಡಗಳು ಬೆಳೆದಿರುತ್ತವೆ. ನಾವು ಸದರಿ ಸ್ಥಳಕ್ಕೆ ಹೋಗಿದ್ದಾಗ ಸದರಿ ವಾಹನದಲ್ಲಿ ಮರಗಳನ್ನು ಆಗಲೇ ತುಂಬಿ ವಾಹನವು ಚಾಲನೆಯಾಗುವ ಸ್ಥಿತಿಯಲ್ಲಿತ್ತು. ನಾನು ವಾಹನವನ್ನು ನೋಡಿದ್ದು ಮುಂಭಾಗದಿಂದ. ನಾವು ಸದರಿ ವಾಹನವನ್ನು ನೋಡಿದಾಗ ಚಾಲಕನು ವಾಹನವನ್ನು ಚಲಿಸಲು ಪ್ರಯತ್ನಿಸಿದ್ದ ಉಳಿದವರೂ ಪಕ್ಕದಲ್ಲಿ ನಿಂತಿದ್ದರು. ನಮ್ಮನ್ನು ನೋಡಿ ಅವರು ಓಡಲು ಪ್ರಾರಂಭಿಸಿದಾಗ ನಾವು ಅವರಿಂದ ಸುಮಾರು 100 ಅಡಿ ದೂರದಲ್ಲಿದ್ದೆವು. ನಾನು ಬೆನ್ನಟ್ಟಿ ಹೋದ ದಿಕ್ಕಿನಲ್ಲಿ ಮೂರು ಜನ ಓಡಿಹೋದರು. ನಾವು ಐದು ಜನ ಸೇರಿ ಅವರ ಹಿಂದೆ ಓಡಿಹೋದೆವು. ಆ ಸ್ಥಳದಲ್ಲಿ 3 ಜನರಿದ್ದರೋ ಅಥವಾ 4 ಜನರಿದ್ದರೋ ಎಂದು ಹೇಳಲು ಸಾಧ್ಯವಿಲ್ಲ. ನಾವು ಅವರನ್ನು ಸುಮಾರು 300 ರಿಂದ 400 ಮೀಟರ್‌ರವರೆಗೆ ಬೆನ್ನಟ್ಟಿ ಹೋದೆವು. ನಮಗೆ ಅರಣ್ಯ ಇಲಾಖೆಯಿಂದ ಶಸ್ತ್ರಾಸ್ತ್ರಗಳನ್ನು ನೀಡಿರುತ್ತಾರೆ. ಸದರಿ ಘಟನೆ ನಡೆದ ದಿನದಂದು ನಾವು ಯಾವುದೇ ಶಸ್ತ್ರಾಸ್ತ್ರಗಳನ್ನು ತೆಗೆದುಕೊಂಡು ಹೋಗಿರಲಿಲ್ಲ. ಸದರಿ ದಿನದಂದು ಶಸ್ತ್ರಾಸ್ತ್ರವನ್ನು ಏಕೆ ತೆಗೆದುಕೊಂಡು ಹೋಗಿರಲಿಲ್ಲ ಎಂದರೇ ಸದರಿ ಶಸ್ತ್ರಾಸ್ತ್ರದ ಬೆಲ್ಟು

ಕಿತ್ತುಹೋಗಿದ್ದುದರಿಂದ ಅದನ್ನು ತೆಗೆದುಕೊಂಡು ಹೋಗಿರುವುದಿಲ್ಲ. ಸದರಿ ಬೆಲ್ಟು ಸುಮಾರು 2–3 ದಿನಗಳಿಂದ ಹಿಂದೆ ಕಿತ್ತುಹೋಗಿದ್ದು ಈ ವಿಷಯವನ್ನು ನಮ್ಮ ಮೇಲಾಧಿಕಾರಿಗಳಿಗೆ ತಿಳಿಸಿರುವುದಿಲ್ಲ. ಶಸ್ತ್ರಾಸ್ತ್ರಗಳನ್ನು ನಮಗೆ ಕೊಟ್ಟಿರುವುದು ನಮ್ಮ ರಕ್ಷಣೆಗಾಗಿ ಹಾಗೂ ಅರಣ್ಯ ರಕ್ಷಣೆಗಾಗಿ ಹಾಗೂ ಕಾಡು ಪ್ರಾಣಿಗಳು ನಮಗೆ ತೊಂದರೆ ಕೊಟ್ಟಾಗ ಅದನ್ನು ಗಾಳಿಯಲ್ಲಿ ಗುಂಡುಹಾರಿಸಲು ನಮಗೆ ನೀಡಲಾಗಿದೆ. ನಾನು ಗಸ್ತಿಗೆ ಶಸ್ತ್ರಾಸ್ತ್ರವನ್ನು ಬೆಲ್ಟು ಕಿತ್ತುಹೋಗಿದ್ದ ಪ್ರಯುಕ್ತ ತೆಗೆದುಕೊಂಡು ಹೋಗುತ್ತಿರಲಿಲ್ಲ. ಬೆಲ್ಟನ್ನು ಹಾಕಲಿಕ್ಕೆ ಮಾದೇವು ಎಂಬ ವ್ಯಕ್ತಿಯ ಬಳಿ ಸದರಿ ಬೆಲ್ಟನ್ನು ನೀಡಲಾಗಿತ್ತು. ಸದರಿ ಪ್ರಕರಣದಲ್ಲಿ ಓಡಿಹೋದಂತಹ ವ್ಯಕ್ತಿಗಳನ್ನು ಹಿಂದೆಯೂ ಕೂಡ ನಾನು ನೋಡಿರುತ್ತೇನೆ ನನಗೆ ಪರಿಚಯವಿರುತ್ತದೆ. ಅವರಲ್ಲಿ ಮಳವಳ್ಳಿಯವನಾದ ಲೋಕಿ, ಕುರಿಮಾದಯ್ಯ ಗಾಣಾಳು ಗ್ರಾಮದವನು. ಲೋಕಿ ಎಂಬುವನನ್ನು ಹಲಗೂರು ಪಟ್ಟಣದಲ್ಲಿ ನೋಡಿರುತ್ತೇನೆ. ಹಲಗೂರು ಟೌನ್‌ಗೆ ಮತ್ತು ಸದರಿ ಅರಣ್ಯ ಪ್ರದೇಶಕ್ಕೂ ಸುಮಾರು 5 ರಿಂದ 6 ಕಿಮೀ ದೂರವಿರುತ್ತದೆ. ಮಹಜರ್ ಬರೆಯುವ ಸಮಯದಲ್ಲಿ ಪಕ್ಕದ ಗ್ರಾಮದ ಜನರನ್ನು ಕರೆಸಿ ಅವರಿಗೆ ಮರಗಳನ್ನು ಕಡಿದು ತುಂಬಿರುವುದನ್ನು ತೋರಿಸಿ ಮಹಜರ್ ತಯಾರಿಸಲಿಲ್ಲ. ವಾಹನವನ್ನು ಘಟನಾ ಸ್ಥಳದಿಂದ ವಲಯ ಕಛೇರಿಗೆ ತರಲು ಅರಣ್ಯ ವೀಕ್ಷಕನಾದ ಜಯರಾಮ್‌ರವರಿಗೆ ಚಾಲಕನನ್ನು ಕರೆದುತರಲು ಹೇಳಿದ್ದೆ ಅವನು ಯಾರೋ ಚಾಲಕನನ್ನು ಕರೆದುಕೊಂಡು ಬಂದಿರುತ್ತಾನೆ. ವಾಹನವನ್ನು ವಲಯ ಕಛೇರಿಗೆ 6 ರಿಂದ 6:30 ಗಂಟೆ ಸಮಯದಲ್ಲಿ ತೆಗೆದುಕೊಂಡು ಬಂದಿರುತ್ತೇನೆ.

ವಾಹನದಲ್ಲಿ ಕಡಿದು ತುಂಬಿದ್ದ ಮರಗಳನ್ನು ಕಡಿದು ಸುಮಾರು 2 ದಿನಗಳಾಗಿರಬಹುದು. ಆ ಅರಣ್ಯ ಪ್ರದೇಶಕ್ಕೆ ಅರಣ್ಯ ರಕ್ಷಕರಾಗಿ ಅ ಸಮಯದಲ್ಲಿ ಉಮೇಶ್‌ರವರು ಹಾಗೂ ಅವರ ಜೊತೆಯಲ್ಲಿ ಜಯರಾಮ್‌ರವರು ಕರ್ತವ್ಯ ನಿರ್ವಹಿಸುತ್ತಿದ್ದರು. ಸದರಿ ಘಟನಾ ಪ್ರದೇಶವು ಸುಮಾರು 300 ರಿಂದ 400 ಹೆಕ್ಟೇರ್ ಪ್ರದೇಶವಿರುತ್ತದೆ. ಸದರಿ ಮರಗಳನ್ನು ಕಡಿದ ಬಗ್ಗೆ ನಮ್ಮ ವಲಯ ಅರಣ್ಯಾಧಿಕಾರಿಗಳಿಗೆ ಹಿಂದೆ ಯಾವ ದೂರುಗಳು ಬಂದಿರುವುದಿಲ್ಲ ವಾಹನದಲ್ಲಿ ತುಂಬಿದ್ದ ಮರಗಳನ್ನು ಕೊಡಲಿಯಿಂದ ಕತ್ತರಿಸಲಾಗಿತ್ತು. ಅರಣ್ಯ ಪ್ರದೇಶದಲ್ಲಿ ಮರಗಳನ್ನು ಕಡಿದರೇ ರಾತ್ರಿಯ ಸಮಯದಲ್ಲಿ ಸುಮಾರು 1 ಕಿಮೀವರೆಗೆ ಶಬ್ದ ಕೇಳಿಸುತ್ತದೆ. ವಾಹನ ನಿಂತಿದ್ದ ಸ್ಥಳದಿಂದ ಗಾಣಾಳು ಗ್ರಾಮದ ಕಡೆಗೆ ನಮ್ಮ ಅರಣ್ಯ ಪ್ರದೇಶದ ವ್ಯಾಪ್ತಿ 100 ರಿಂದ 200 ಮೀಟರ್ ದೂರ ಇರುತ್ತದೆ ಅಲ್ಲಿಂದ ಮುಂದಕ್ಕೆ ವ್ಯವಸಾಯದ ಜಮೀನುಗಳಿರುತ್ತವೆ. ಸದರಿ ಗಾಣಾಳು ಗ್ರಾಮದಲ್ಲಿ 100 ಮನೆಗಳಿರುತ್ತವೆ. ವಲಯ ಅರಣ್ಯಾಧಿಕಾರಿಯವರು ನಮಗೆ ಮಾಹಿತಿ ಕೊಟ್ಟು ಬರಲು ಹೇಳಿದ ಸ್ಥಳಕ್ಕೆ ನಾವು ಹೋಗಿರಲಿಲ್ಲ ಎನ್ನುವುದು ಸರಿಯಲ್ಲ. ನಮಗೆ ಮೊಬೈಲ್ ಕರೆ ಬಂದಿರಲಿಲ್ಲ ಎನ್ನುವುದು ಸರಿಯಲ್ಲ. ನಾನು ಸ್ವಂತ ಮೊಬೈಲ್ ಹೊಂದಿರುವ ಬಗ್ಗೆ ಮಾಹಿತಿ ನೀಡಿರುವುದಿಲ್ಲ. ವಾಹನ ನಿಂತಿದ್ದ ಸ್ಥಳಕ್ಕೆ ಹೋಗಿರಲಿಲ್ಲ ಮತ್ತು ಅದರಲ್ಲಿ ಮರಗಳನ್ನು ತುಂಬಿರಲಿಲ್ಲ ಮತ್ತು ಆ ಸ್ಥಳದಿಂದ 3 ಜನ ಓಡಿ ಹೋದರು ಅದರಲ್ಲಿ ಲೋಕಿ ಮತ್ತು ಕುರಿಮಾದಯ್ಯರವರು ಇದ್ದರೆಂದು ಸುಳ್ಳು ಹೇಳುತ್ತಿದ್ದೇನೆ ಎನ್ನುವುದು ಸರಿಯಲ್ಲ. ಸ್ಥಳದಲ್ಲಿ ವಾಹನ ಮತ್ತು ಮರಗಳನ್ನು ವಶಪಡಿಸಿಕೊಂಡು ಮಹಜರ್ ಬರೆದಿಲ್ಲ ಎನ್ನುವುದು ಸರಿಯಲ್ಲ. ಶಸ್ತ್ರಾಸ್ತ್ರದ ಬೆಲ್ಟ್ ಕಿತ್ತುಹೋಗಿತ್ತು ಎಂದು ಸುಳ್ಳು ಹೇಳುತ್ತಿದ್ದೇನೆ ಎನ್ನುವುದು ಸರಿಯಲ್ಲ. ನಾವು ಸದರಿ ವಾಹನವನ್ನು ಘಟನಾ ಸ್ಥಳದಿಂದ ವಲಯ ಅರಣ್ಯ ಕಛೇರಿಗೆ ತರುವಾಗ ಕರ್ಲಕಟ್ಟೆ ಗ್ರಾಮದ ಮುಖಾಂತರ ತೆಗೆದುಕೊಂಡು ಬಂದಿರುತ್ತೇವೆ. ಕರ್ಲಕಟ್ಟೆ ಗ್ರಾಮದಲ್ಲಿ ಸುಮಾರು 100 ಮನೆಗಳಿರುತ್ತವೆ. ಸದರಿ ಗ್ರಾಮದ ಕೆಲವು ಜನರು ನನಗೆ ಪರಿಚಯವಿರುತ್ತಾರೆ. ನಾವು ವಾಹನವನ್ನು ತೆಗೆದುಕೊಂಡು ಹೋದಾಗ ರಸ್ತೆಯಲ್ಲಿ ಜನರು ಓಡಾಡುತ್ತಿದ್ದರು. ಅದೇ ರೀತಿ ಗಾಣಾಳು ಗ್ರಾಮದ ಕೆಲವು ಜನರು ಸಹ ನನಗೆ ಪರಿಚಯವಿರುತ್ತಾರೆ ಎಂದಿರುತ್ತಾರೆ.

ಪ್ರಾಸಿಕ್ಯೂಷನ್ ಪರ ಪಿಡಬ್ಲ್ಯು–3 ಸಾಕ್ಷಿ ನುಡಿಯುತ್ತಾ, ದಿನಾಂಕ:23/05/09 ರಂದು ನಾನು ಮತ್ತು ಅರಣ್ಯ ರಕ್ಷಕ ದೇವರಾಜು, ಅರಣ್ಯ ವೀಕ್ಷಕರಾದ ಮಾದಿನಾಯ್ಕರವರು ಮತ್ತು ಜಿ.ಕೆ.ಮಾದೇಗೌಡರವರು ಗ'ಸ್ತು ಕರ್ತವ್ಯದಲ್ಲಿದ್ದಾಗ ನಮ್ಮ ವಲಯ ಅರಣ್ಯಾಧಿಕಾರಿಗಳು ಅಂಕಣ್ಣದೊಡ್ಡಿ ಪ್ರದೇಶ'ಕ್ಕೆ ಬರಲು ತಿಳಿಸಿದ ಮೇರೆಗೆ ನಾವು ಸ್ಥಳಕ್ಕೆ ಬೇಟಿ ನೀಡಿದಾಗ ಸಮಯ ಸುಮಾರು 04–30 ಆಗಿತ್ತು. ನಾವು ಸ್ಥಳಕ್ಕೆ ಹೋಗುವುದಕ್ಕಿಂತ ಮೊದಲು 100 ಮೀಟರ್ ಅಂತರ ದಿಂದ ನೋಡಲಾಗಿ ಒಂದು ಕ್ಯಾಂಟರ್ ವಾಹನ ನಿಂತಿದ್ದು ನಂತರ ಹತ್ತಿರ ಹೋಗಿ ನೋಡಲಾಗಿ ಅದರ ಸಂಖ್ಯೆ:ಕೆ.ಎಲ್–11–ಎಫ್–9117 ಆಗಿತ್ತು. ಸದರಿ ಕ್ಯಾಂಟರ್ ವಾಹನವನ್ನು ನಾವು ದೂರದಿಂದ ನೋಡಲಾಗಿ ಕಗ್ಗಲಿ, ಚುಜ್ಜಲಿ ಮತ್ತು ಬೇರೆ ಇತರೆ ಜಾತಿಯ ಮರಗಳನ್ನು ತುಂಬುತ್ತಿದ್ದು ಕಂಡುಬಂದಿತು. ಸದರಿ ಮರಗಳನ್ನು ತುಂಬುತ್ತಿದ್ದವರು ನಮ್ಮನ್ನು ನೋಡಿ ಓಡಿ ಹೋದರು. ಸ್ಥಳದಲ್ಲಿದ್ದ ನಮ್ಮ ವನಪಾಲಕರಾದ ದೇವರಾಜುರವರು ಸ್ಥಳದಿಂದ ಆರೋಪಿಗಳು ಓಡಿಹೋಗಿರುವುದಾಗಿ ಅವರ ಹೆಸರು ಲೋಕಿ ಮತು ಮಹದಯ್ಯ ಉರುಫ್ ಕುರಿಮಾದಯ್ಯ ಎಂದು ಹೇಳಿದರು. ವಾಹನದ ಚಾಲಕ ಮಳವಳ್ಳಿ ವಾಸಿ ಎಂದು ಹಾಗೂ ಇನ್ನೊಬ್ಬ ಗಾಣಾಳು ಗ್ರಾಮದವನೆಂದು ಹೇಳಿದ್ದರಿಂದ ನನಗೂ ತಿಳಿಯಿತು. ಅಲ್ಲಿ ಸ್ಥಳ ಪರಿಶೀಲಿಸಲಾಗಿ ಚುಜ್ಜಲಿ, ಕಗ್ಗಲಿ ಮತ್ತು ವಿವಿಧ

ಜಾತಿ ಮರಗಳನ್ನು ಕತ್ತರಿಸಿರುವುದನ್ನು ಪರಿಶೀಲನೆ ಮಾಡಿ ಅವುಗಳಿಗೆ ಗುರುತು ಹಾಕಿ ಮರದ ಬುಡಗಳಿಗೆ ಇಲಾಖಾ ಮೊಹರನ್ನು ಹಾಕಲಾಯಿತು. ನಂತರ ಸ್ಥಳದಲ್ಲಿ ಮಹಜರ್ ಬರೆದು ವಾಹನ ಮತ್ತು ಅದರಲ್ಲಿ ತುಂಬಿದ್ದ ಮರಗಳನ್ನು ಅವ"ಾನತ್ತುಪಡಿಸಿ ಕೊಳ್ಳಲಾಯಿತು. ಹಾಗೂ ವಾಹನ ಮತ್ತು ಮರಗಳನ್ನು ನೋಡಿದರೆ ಗುರುತಿಸುತ್ತೇನೆ. ವಾಹನವನ್ನು ಈಗಾಗಲೇ ಎಂಓ–1 ಎಂದು ಗುರುತಿಸಲಾಗಿರುತ್ತದೆ ಮತ್ತು ಮರಗಳನ್ನು ಎಂಓ–1 ರಿಂದ 50 ಎಂದು ಗುರುತಿಸಲಾಗಿರುತ್ತದೆ. ಅವುಗಳನ್ನು ನೋಡಿದರೆ ಗುರುತಿಸುತ್ತೇನೆ. ವಾಹನ ಚಾಲಕರು ಮತ್ತು ಇತರೇ ಆರೋಪಿಗಳನ್ನು ನೋಡಿದರೆ ಗುರುತಿಸುತ್ತೇನೆ ನಂತರ ವಾಹನದೊಂದಿಗೆ ಮರಗಳನ್ನು ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಕಛೇರಿಗೆ ಹಾಜರುಪಡಿಸಲಾಯಿತು. ಸದರಿ ಮರಗಳನ್ನು ನಿಷೇಧಿತ ಅರಣ್ಯ ಪ್ರದೇಶದಿಂದ ಕಡಿದು ಸಾಗಿಸಲು ಯಾವುದೇ ಪರವಾನಗಿಯನ್ನು ಪಡೆದಿಲ್ಲದಿರುವುದು ಕಂಡು ಬಂದಿತು.

ಅರ್ಜಿದಾರರ ಪರವಾದ ಪಾಟೀ ಸವಾಲಿಗೆ ಉತ್ತರಿಸುತ್ತಾ,

ನಾವು ಗಸ್ತುಕರ್ತವ್ಯದಲ್ಲಿದ್ದ ಸ್ಥಳ ನೇರಳೆಮರದ ಗುಂಡಿ ಪ್ರದೇಶವಾಗಿರುತ್ತದೆ. ವನಪಾಲಕರಾದ ಡಿ.ದೇವರಾಜುರವರಿಗೆ ಮೊಬೈಲ್ ಮೂಲಕ ಮರಗಳನ್ನು ಕಡಿದು ಸಾಗಿಸುತ್ತಿದ್ದಾರೆಂಬ ಮಾಹಿತಿ ಬಂದಿರುತ್ತದೆ. ವಲಯ ಅರಣ್ಯಾಧಿಕಾರಿಯವರು ನಮ್ಮನ್ನು ಮುಳ್ಳಯ್ಯನ ಕಟ್ಟೆ ಅರಣ್ಯಪ್ರದೇಶಕ್ಕೆ ಬರಲು ಹೇಳಿದ್ದರಿಂದ ಅಲ್ಲಿಗೆ ಹೋದೆವು. ಸದರಿ ವಲಯ ಅರಣ್ಯಾಧಿಕಾರಿಯವರು ಅರಣ್ಯ ವೀಕ್ಷಕನಾದ ಜಯರಾಮ್‌ರವರ ಜೊತೆ ಮೋಟಾರ್ ಬೈಕ್‌ನಲ್ಲಿ ಬಂದರು. ನಾವು ಸದರಿ ಘಟನಾಸ್ಥಳಕ್ಕೆ ಹೋಗುವಷ್ಟರಲ್ಲಿ ವಾಹನದಲ್ಲಿ ಮರಗಳನ್ನು ಕಡಿದು ಪೂರ್ಣ ತುಂಬಲಾಗಿತ್ತು. ನಾವು ಸ್ಥಳಕ್ಕೆ ಹೋದಾಗ ಅಲ್ಲಿದ್ದವರೆಲ್ಲರೂ ಓಡಿ ಹೋಗಿರುತ್ತಾರೆ. ನಾನು ಮತ್ತು ದೇವರಾಜು ಅವರು ಒಟ್ಟಿಗೆ ಕೂಡಿ ಸದರಿ ಘಟನಾ ಸ್ಥಳದ ಹತ್ತಿರ ಬಂದೆವು. ನಾನು ಮತ್ತು ಮಾದಿನಾಯ್ಕ ಇಬ್ಬರು ಸ್ಥಳದಿಂದ ಓಡಿ ಹೋದವರನ್ನು ಓಡಿಸಿಕೊಂಡು ಹೋದೆವು ನಾವು ಇಬ್ಬರನ್ನು ಓಡಿಸಿಕೊಂಡು ಹೋದೆವು ನಾವು ಓಡಿಸಿಕೊಂಡು ಹೋದ ವ್ಯಕ್ತಿಗಳು ನಮ್ಮ ಕಣ್ಣಿಗೆ ಕಾಣಲಿಲ್ಲ. ನಮ್ಮ ಇತರೇ ಸಿಬ್ಬಂದಿಗಳು ವಲಯ ಅರಣ್ಯಾಧಿಕಾರಿಯವರನ್ನು ವಾಹನದ ಬಳಿ ಬಿಟ್ಟು ಇನ್ನಿಬ್ಬರನ್ನು ಬೆನ್ನಟ್ಟಿ ಹೋದರು. ದೇವರಾಜುರವರು ಅವರಿಗೆ ನೀಡಿದ್ದ ಬಂದೂಕವನ್ನು ತಂದಿರುವುದಿಲ್ಲ. ಘಟನಾ ದಿನಾಂಕದ ಹಿಂದಿನ 2–3 ದಿನಗಳಿಂದಲೂ ಅವರ ಜೊತೆ ಕೆಲಸ ಮಾಡುತ್ತಿರುತ್ತೇನೆ. ಅವರು ಸುಮಾರು 3–4 ದಿನಗಳಿಂದ ಬಂದೂಕವನ್ನು ತಂದಿರುವುದಿಲ್ಲ. ಅದರ ಬೆಲ್ಟು ಕಿತ್ತುಹೋಗಿದ್ದುದರಿಂದ ಗಸ್ತುಕಾರ್ಯಕ್ಕೆ ತೆಗೆದುಕೊಂಡು ಬಂದಿರುವುದಿಲ್ಲ. ಬೆಲ್ಟು ಕಿತ್ತುಹೋಗಿರುವುದರಿಂದ ಬಂದೂಕನ್ನು ತೆಗೆದುಕೊಂಡು ಗಸ್ತುಕರ್ತವ್ಯ ನಿರ್ವಹಿಸಲು ಸಾಧ್ಯವಾಗುವುದಿಲ್ಲ. ಬಂದೂಕು ಇಲ್ಲದಿದ್ದರೂ ಸಹ ನಮ್ಮ ರಕ್ಷಣೆಗಾಗಿ ಕತ್ತಿಯನ್ನು ಜೊತೆಯಲ್ಲಿ ತೆಗೆದುಕೊಂಡು ಹೋಗಿದ್ದೆವು. ನಮ್ಮ ವಲಯ ಅರಣ್ಯಾಧಿಕಾರಿಯವರನ್ನು ಈ ಘಟನೆ ನಡೆದಕ್ಕಿಂತ ಮೊದಲು ಆಗಿಂದಾಗ್ಗೆ ಭೇಟಿಯಾಗುತ್ತಿದ್ದೆವು. ಬಂದೂಕದ ಬೆಲ್ಟ್ ಕಿತ್ತೋಗಿರುವ ವಿಚಾರವನ್ನು ವಲಯ ಅರಣ್ಯಾಧಿಕಾರಿಯವರಿಗೆ ತಿಳಿಸಿರಲಿಲ್ಲ. ವಾಹನ ನಿಂತಿದ್ದ ಸ್ಥಳಕ್ಕೂ ಗಾಣಾಳು ಗ್ರಾಮಕ್ಕೂ ಸುಮಾರು 1 ರಿಂದ ಒಂದೂವರೆ ಕಿಮೀ ದೂರವಿರುತ್ತದೆ. ವಾಹನ ನಿಂತಿದ್ದ ಸ್ಥಳದಲ್ಲಿ ಸುಮಾರು 6:00 6:30 ಗಂಟೆಯವರೆಗೂ ಇದ್ದೆವು ಮಹಜರನ್ನು ವಲಯ ಅರಣ್ಯಾಧಿಕಾರಿಯವರೇ ಬರೇಸಿರುತ್ತಾರೆ. ಸದರಿ ಮಹಜರ್ ಬರೆದಾಗ ಯಾವುದೇ ಸಾರ್ವಜನಿಕರು ಸ್ಥಳದಲ್ಲಿ ಇರಲಿಲ್ಲ. ವಾಹನವನ್ನು ವನಪಾಲಕರಾದ ಡಿ.ದೇವರಾಜುರವರು ಬೇರೆ ಚಾಲಕನನ್ನು ಕರೆಸಿ ವಲಯ ಕಚೇರಿಗೆ ತೆಗೆದುಕೊಂಡು ಬಂದಿರುತ್ತಾರೆ.

ವಲಯ ಅರಣ್ಯಾಧಿಕಾರಿಯವರು ನಮಗೆ ಮಾಹಿತಿ ಕೊಟ್ಟು ಬರಲು ಹೇಳಿದ ಸ್ಥಳಕ್ಕೆ ನಾವು ಹೋಗಿರಲಿಲ್ಲ ಎನ್ನುವುದು ಸರಿಯಲ್ಲ. ನಮಗೆ ಮೊಬೈಲ್ ಕರೆ ಬಂದಿರಲಿಲ್ಲ ಎನ್ನುವುದು ಸರಿಯಲ್ಲ. ನಾನು ಸ್ವಂತ ಮೊಬೈಲ್ ಹೊಂದಿರುವ ಬಗ್ಗೆ ಮಾಹಿತಿ ನೀಡಿರುವುದಿಲ್ಲ. ವಾಹನ ನಿಂತಿದ್ದ ಸ್ಥಳಕ್ಕೆ ಹೋಗಿರಲಿಲ್ಲ ಮತ್ತು ಅದರಲ್ಲಿ ಮರಗಳನ್ನು ತುಂಬಿರಲಿಲ್ಲ ಮತ್ತು ಆ ಸ್ಥಳದಿಂದ 3 ಜನ ಓಡಿ ಹೋದರು ಅದರಲ್ಲಿ ಲೋಕಿ ಮತ್ತು ಕುರಿಮಾದಯ್ಯರವರು ಇದ್ದರೆಂದು ಸುಳ್ಳು ಹೇಳುತ್ತಿದ್ದೇನೆ ಎನ್ನುವುದು ಸರಿಯಲ್ಲ. ಸ್ಥಳದಲ್ಲಿ ವಾಹನ ಮತ್ತು ಮರಗಳನ್ನು ವಶಪಡಿಸಿಕೊಂಡು ಮಹಜರ್ ಬರೆದಿಲ್ಲ ಎನ್ನುವುದು ಸರಿಯಲ್ಲ. ಶಸ್ತ್ರಾಸ್ತ್ರದ ಬೆಲ್ಟ್ ಕಿತ್ತುಹೋಗಿತ್ತು ಎಂದು ಸುಳ್ಳು ಹೇಳುತ್ತಿದ್ದೇನೆ ಎನ್ನುವುದು ಸರಿಯಲ್ಲ ಎಂದು ತಮ್ಮ ಹೇಳಿಕೆಯನ್ನು ನೀಡಿರುತ್ತಾರೆ. ಸಾಕ್ಷಿದಾರರು ನೀಡಿರುವ ಸಾಕ್ಷಿ ಹೇಳಿಕೆಗಳು ಗುರುತಿಸಲಾದ ನಿಶಾನೆಗಳನ್ನು ಪರಿಶೀಲಿಸಲಾಯಿತು. ಫಿರ್ಯಾದಿದಾರರ ಪರ ವಕೀಲರ ವಾದಮಂಡನೆ ಹಾಗೂ ಅರ್ಜಿದಾರರ ಪರ ವಕೀಲರ ವಾದ ಮಂಡನೆ ಆಲಿಸಲಾಯಿತು.

ಫಿರ್ಯಾದಿದಾರರ ಪರ ವಕೀಲರು ಕಾಯ್ದಿಟ್ಟ ಅರಣ್ಯ ಪ್ರದೇಶದಲ್ಲಿ ಅಮಾನತ್ತುಪಡಿಸಿದ ಮಾಲನ್ನು ವಾಹನದಲ್ಲಿ ಅನುಮತಿಯಿಲ್ಲದೇ ತೆಗೆದುಕೊಂಡು ಹೋಗುತ್ತಿರುವುದರಿಂದ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ವಾದಮಂಡಿಸಿರುತ್ತಾರೆ.

ಅರ್ಜಿದಾರರ ಪರ ವಕೀಲರು ಅರ್ಜಿದಾರರು ವಾಹನದ ಮಾಲೀಕರಾಗಿದ್ದು ವಾಹನವನ್ನು ಬಾಡಿಗೆಗೆ ತಮ್ಮ ಚಾಲಕನ ಮೂಲಕ ನೀಡಿದ್ದು ಅವನು ಈ ಅರಣ್ಯ ಅಪರಾಧ ಕೃತ್ಯದಲ್ಲಿ ಭಾಗಿಯಾಗಿದ್ದಾನೆಂದು ಮಾಲೀಕರು ಸ್ವತಃ ಭಾಗಿಯಾಗಿರುವುದಿಲ್ಲವೆಂದು ವಾದಿಸಿರುತ್ತಾರೆ. ಅರ್ಜಿದಾರರ ಪರವಾದ ವಕೀಲರು ಬದಲಾವಣೆಗೊಂಡ ಮೇರೆಗೆ ವಕೀಲರ ಕೋರಿಕೆ ಮೇರೆಗೆ ಸಾಕ್ಷಿದಾರರ ಪಾಟೀಸವಾಲು ಅಗತ್ಯವಾಗಿರುವುದರಿಂದ ಸಾಕ್ಷಿದಾರರ ವಿಚಾರಣೆ ನಡೆಸಲು ಅವಕಾಶಕೋರಲಾಯಿತು. ನೈಸರ್ಗಿಕ ನ್ಯಾಯನಿರ್ಣಯದಂತೆ ಸಾಕ್ಷಿದಾರರನ್ನು ಪಾಟೀಸವಾಲು ಮಾಡಲು ಅವಕಾಶನೀಡಲಾಗಿದ್ದು, ಅರ್ಜಿದಾರರ ಪರ ವಕೀಲರು ಪಿಡಬ್ಲ್ಯು–2, ಪಿಡಬ್ಲ್ಯು–3 ಸಾಕ್ಷಿದಾರರನ್ನು ವಿಚಾರಣೆ ನಡೆಸಿರುತ್ತಾರೆ. ಪಿಡಬ್ಲ್ಯು–1ರ ಸಾಕ್ಷಿದಾರರು ವರ್ಗಾವಣೆಗೊಂಡಿದ್ದ ಮೇರೆಗೆ ಅನೇಕ ಬಾರಿ ಸಮನ್ಸ್ ನೀಡಲಾಗಿದ್ದರೂ ಪಾಟೀಸವಾಲಿಗೆ ಗೈರುಹಾಜರಾಗಿರುತ್ತಾರೆ. ಮತ್ತೊಮ್ಮೆ ವಾದಮಂಡನೆಗೆ ಅರ್ಜಿದಾರರಿಗೆ ಕಾಲಾವಕಾಶ ನೀಡಲಾಗಿದ್ದರೂ ವಾದಮಂಡನೆಯಲ್ಲಿ ನಿರಾಸಕ್ತಿ ಹೊಂದಿರುವುದರಿಂದ ಪ್ರಕರಣದ ವಿಚಾರಣೆಯು ದಿನಾಂಕ:19/06/2009ರಿಂದ ಪ್ರಾರಂಭವಾಗಿ ಒಂದು ವರ್ಷ ಕಳೆದಿದ್ದು ಶೀಘ್ರಗತಿಯಲ್ಲಿ ನ್ಯಾಯನಿರ್ಣಯದ ತೀರ್ಪು ನೀಡಲು ನ್ಯಾಯಾಲಯ ಬಯಸಿದೆ.

**ವಿಚಾರಣಾಂಶಗಳು,**

ಅರಣ್ಯ ಅಪರಾಧ ಪ್ರಕರಣದಲ್ಲಿ ನೊಂದಾಯಿತಗೊಂಡು ಫಿರ್ಯಾಧಿದಾರರು ಸಲ್ಲಿಸಲಾದ ದಾಖಲಾತಿಗಳು ಪ್ರಕರಣದಲ್ಲಿ ವಶಪಡಿಸಿಕೊಂಡ ವಸ್ತುಗಳ ಹಾಜರಾತಿ ಅರ್ಜಿದಾರರ ಅರ್ಜಿವಿಚಾರ ಎರಡೂ ಕಡೆಯ ವಕೀಲರ ವಾದಮಂಡನೆ ವಿಚಾರಣಾ ಪ್ರಕ್ರಿಯೆಯಲ್ಲಿ ಸಾಕ್ಷಿದಾರರ ಹೇಳಿಕೆ ದಾಖಲು, ದಾಖಲಾತಿಗಳ ಹಾಗೂ ಸ್ವತ್ತುಗಳ ನಿಶಾನೆ ಗುರುತುಗಳನ್ನು ಕೂಲಂಕುಷವಾಗಿ ಪರಿಶೀಲಿಸಲಾಯಿತು. ಈ ಪರಿಶೀಲನಾಂಶಗಳು ಈ ಕೆಳಕಂಡಂತೆ ಕಂಡುಬಂದಿರುತ್ತವೆ.

1. ಫಿರ್ಯಾಧಿದಾರರು ಅರಣ್ಯ ಅಪರಾಧ ಪ್ರಕರಣದಲ್ಲಿ ಜಪ್ತಿ ಮಾಡಲಾದ ಸರಕು ಸಾಗಾಣಿಕೆ ವಾಹನ ಟಾಟಾ–407 ಸಂಖ್ಯೆ:ಕೆ.ಎಲ್–11 ಎಫ್–9117 ಭಾಗಿಯಾಗಿರುವುದರ ಬಗ್ಗೆ ಸಾಬೀತು ಪಡಿಸಿದ್ದಾರೆಯೇ ?
2. ಅರ್ಜಿದಾರರು ಸರಕು ಸಾಗಾಣಿಕೆ ವಾಹನ ಟಾಟಾ–407 ಸಂಖ್ಯೆ:ಕೆ.ಎಲ್–11 ಎಫ್–9117ರಲ್ಲಿ ಅಕ್ರಮವಾಗಿ ಅರಣ್ಯ ಸಂಪತ್ತನ್ನು ಸಾಗಿಸುತ್ತಿರುವುದು ತಮ್ಮ ಅರಿವಿಗೆ ಬಾರದೇ ಅಪರಾಧ ಪ್ರಕರಣದಲ್ಲಿ ಭಾಗಿಯಾಗಿದೆ ಎಂಬುದನ್ನು ಸಾಭೀತುಪಡಿಸಿದ್ದಾರೆಯೇ ?
3. ಈ ಅಪರಾಧ ಪ್ರಕರಣದ ಬಗ್ಗೆ ಕೈಗೊಂಡ ತೀರ್ಮಾನ ಏನು ?

ಮೇಲ್ಕಂಡ ಪರಿಶೀಲನಾಂಶಗಳನ್ನು ವಿವರವಾಗಿ ವಿಶ್ಲೇಷಿಸಿದಾಗ

1. ಫಿರ್ಯಾದಿದಾರರು ಸಲ್ಲಿಸಿದ ದಾಖಲಾತಿಗಳು ಸಾಕ್ಷಿದಾರರ ಹೇಳಿಕೆ ಹಾಗೂ ಸರ್ಕಾರಿ ವಕೀಲರ ವಾದಮಂಡನೆಯಿಂದ ವಾಹನ ಸಂಖ್ಯೆ ಟಾಟಾ–407 ಸಂಖ್ಯೆ:ಕೆ.ಎಲ್–11 ಎಫ್–9117ರಲ್ಲಿ ಅಕ್ರಮವಾಗಿ ಅರಣ್ಯ ಸಂಪತ್ತನ್ನು ಸಾಗಿಸಲಾಗುತ್ತಿರುವುದು ಸ್ಪಷ್ಟವಾಗಿ ಗೋಚರಿಸುತ್ತದೆ.
2. ಅರ್ಜಿದಾರರು ವಾಹನ ಮಾಲೀಕರಾಗಿದ್ದು ಚಾಲಕನ ನಿರ್ಲಕ್ಷತನದಿಂದ ಈ ಕೃತ್ಯದಲ್ಲಿ ಭಾಗಿಯಾಗಿರುತ್ತದೆ ಎಂದು ತಿಳಿಸಿದ್ದರೂ, ತನ್ನ ಗಮನಕ್ಕೆ ಬಾರದೇ ಈ ಕೃತ್ಯದಲ್ಲಿ ಭಾಗವಹಿಸಿದೆ ಎಂದು ಸಾಭೀತುಪಡಿಸುವಲ್ಲಿ ವಿಫಲರಾಗಿರುತ್ತಾರೆ. ಆದುದರಿಂದ ವಾಹನ ಮಾಲೀಕರು ಚಾಲಕನ ಕೃತ್ಯಕ್ಕೆ ಹೊಣೆಗಾರರಾಗಿರುತ್ತಾರೆ (Vicarious Liability) ವಾಹನವು ಅರಣ್ಯ ಅಪರಾಧ ಕೃತ್ಯದಲ್ಲಿ ಭಾಗಿಯಾಗದಂತೆ ನೋಡಿಕೊಳ್ಳುವುದು ಅವರ ಕರ್ತವ್ಯವಾಗಿದ್ದು ಅದರಲ್ಲಿ ವಿಫಲರಾಗಿರುತ್ತಾರೆ ಎಂಬ ಎರಡು ಅಂಶಗಳನ್ನು ಪರಿಶೀಲನೆ ಕೈಗೊಂಡು ತೀರ್ಮಾನ ನೀಡಲಾಗಿದೆ.

ಈ ಮೇಲಿನ ಅಂಶಗಳಿಂದ ಕಂಡು ಬರುವ ಪರಿಶೀಲನಾಂಶಗಳು

1. ಸಕರಾತ್ಮಕ
2. ನಕರಾತ್ಮಕ
3. ಆದೇಶ, ಏನು ಎಂಬುದಾಗಿರುತ್ತದೆ. ?

ಮೇಲ್ಕಂಡ ಎಲ್ಲಾ ಅಂಶಗಳ ಪರಿಶೀಲನಾತ್ಮಕ ನಿರ್ಣಯದಂತೆ ಅರಣ್ಯ ಅಪರಾಧ ಪ್ರಕರಣದ ಸಮನ್ವಯಕ್ಕೆ ಸಂಬಂಧಿಸಿದಂತೆ ಗೌರವಾನ್ವಿತ ಸರ್ವೋಚ್ಚ ನ್ಯಾಯಾಲಯದ ಐಎಲ್ಆರ್ 1985/KRNT/2571ರ ರಮೇಶ್.ಎನ್.ಧೀಕ್ಷಿತ್ ವಿರುದ್ದ ಕರ್ನಾಟಕ ರಾಜ್ಯ ಸರ್ಕಾರದ ಪ್ರಕರಣದಲ್ಲಿ "ಮಾಲೀಕರುಗಳು ತಾವು ಅಥವಾ ತಮ್ಮ ಏಜೆಂಟರುಗಳು ಮತ್ತು ವಾಹನದ ಮೇಲ್ವಿಚಾರಣೆ ನೋಡಿಕೊಳ್ಳುವ ಎಲ್ಲಾ ವ್ಯಕ್ತಿಗಳು ಅಪರಾಧದಲ್ಲಿ ಭಾಗಿಗಳಾಗಿಲ್ಲ ಎಂದು ರುಜುವಾತುಪಡಿಸುವ

ಜವಾಬ್ದಾರಿ ಅವರ ಮೇಲಿರುತ್ತದೆ. ಮತ್ತು ಮಾಲೀಕರು ತೆಗೆದುಕೊಂಡ ಎಲ್ಲಾ ಮುನ್ನೆಚ್ಚರಿಕೆಗಳನ್ನು ಖಾತರಿಪಡಿಸಿ, ನ್ಯಾಯಾಲಯಕ್ಕೆ ತಿಳಿದುಹೇಳಬೇಕಾಗುತ್ತದೆ" ಎಂದಿರುತ್ತದೆ.

ಸರ್ವೋಚ್ಚ ನ್ಯಾಯಾಲಯದ ಮತ್ತೊಂದು ಪ್ರಕರಣ ಸಂಖ್ಯೆ: ಸಿಆರ್‌ಎ ನಂ:1484/2003 (SLP(CRI) No:3046/2003) ದಿನಾಂಕ:11/12/2003ರ ಸೆಕ್ಷನ್ ಫಾರೆಸ್ಟರ್ ಮತ್ತು ಇತರರ ವಿರುದ್ಧ ಮನ್ಸೂರ್ ಅಲಿಖಾನ್ ಪ್ರಕರಣದಲ್ಲಿ ಸಿಆರ್‌ಎ ನಂ:668/2000 ದಿನಾಂಕ:17/08/2000ದ ಕರ್ನಾಟಕ ರಾಜ್ಯ ವಿರುದ್ಧ ಕೆ.ಕೃಷ್ಣನ್ ಪ್ರಕರಣದ ಅಂಶಗಳನ್ನೇ ಒತ್ತಿಹೇಳಿರುವುದರಿಂದ ಈ ವಾಸ್ತಾವಾಂಶಗಳನ್ನು ಈ ಅರಣ್ಯ ಅಪರಾಧ ಪ್ರಕರಣಕ್ಕೂ ಅಳವಡಿಸಿಕೊಂಡು ಈ ಕೆಳಗಿನಂತೆ ಆದೇಶ ನೀಡಿರುತ್ತೇನೆ.

**"ಆದೇಶ"**

ಕೆ.ಹೆಚ್.ವಿನಯ್‌ಕುಮಾರ್ ಭಾ.ಅ.ಸೇ., ಅಧಿಕಾರಿಯುತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಮಂಡ್ಯ ವಿಭಾಗ, ಮಂಡ್ಯ ಆದ ನಾನು ಸದರಿ ಅರಣ್ಯ ಮೊಕದ್ದಮೆ 10/09–10ರಲ್ಲಿ ಅಮಾನತ್ತುಪಡಿಸಲಾದ ಸರಕು ಸಾಗಾಣಿಕೆ ವಾಹನವಾದ ಟಾಟಾ–407 ಸಂಖ್ಯೆ:ಕೆ.ಎಲ್–11–ಎಫ್–9117 ವಾಹನವು ವಿಚಾರಣೆಯಲ್ಲಿ ಹಾಗೂ ಸಾಕ್ಷ್ಯಾಧಾರಗಳು, ದಾಖಲಾತಿಗಳಿಂದ ಅರಣ್ಯಸಂಪತ್ತಿನ ಅಕ್ರಮ ಸಾಗಾಣಿಕೆಯಲ್ಲಿ ತೊಡಗಿದ್ದಿದ್ದು ಧೃಢಪಟ್ಟಿದ್ದು ವಾಹನದಲ್ಲಿ ಸಾಗಿಸಲಾಗುತ್ತಿದ್ದ ಕಗ್ಗಲಿ, ಚುಜ್ಜಲಿ ಮತ್ತು ಇತರೇ ಕಾಡುಜಾತಿಯ ಒಂದು ಸರಕು ಸಾಗಾಣಿಕೆ ವಾಹನದ ಭರ್ತಿ ಸೌದೆಯನ್ನು ಹಾಗೂ ಪ್ರಕರಣದಲ್ಲಿ ಅಮಾನತ್ತುಪಡಿಸಿಕೊಳ್ಳಲಾದ ಸರಕು ಸಾಗಾಣಿಕೆ ವಾಹನವಾದ ಟಾಟಾ–407 ಸಂಖ್ಯೆ: ಕೆ.ಎಲ್–11–ಎಫ್–9117 ವಾಹನವನ್ನು ಸರ್ಕಾರಕ್ಕೆ ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 71ಎ ರಿಂದ 71ಜಿರವರೆಗೆ ದತ್ತವಾದ ಅಧಿಕಾರದ ಮೇರೆಗೆ ಮುಟ್ಟುಗೋಲು ಹಾಕಿಕೊಂಡು ಆದೇಶ ಮಾಡಿರುತ್ತೇನೆ. ಇಂದಿನಿಂದ 30 ದಿನಗಳ ಕಾಲ ಸದರಿ ಆದೇಶದ ವಿರುದ್ಧ ಮೇಲ್ಮನವಿ ಸಲ್ಲಿಸಲು ಕಾಲಾವಕಾಶವಿದ್ದು, ನಂತರದಲ್ಲಿ ಈ ಆದೇಶವು ಜಾರಿಗೆ ಬರುತ್ತದೆ.

ಈ ಆದೇಶವನ್ನು ಇಂದು ದಿನಾಂಕ:25/06/2010ರಂದು ತೆರೆದ ನ್ಯಾಯಾಲಯದಲ್ಲಿ ನ'ನ್ನ ಸಹಿಯೊಂದಿಗೆ ಉದ್ಘೋಷಿಸಿರುತ್ತೇನೆ.

ಅಧಿಕಾರಿಯುತ ಅಧಿಕಾರಿ ಹಾಗೂ,
ಉಪ ಅರಣ್ಯ ಸಂರಕ್ಷಣಾಧಿಕಾರಿ,
ಮಂಡ್ಯ ವಿಭಾಗ, ಮಂಡ್ಯ.

ಪಿ.ಆರ್.1113

**ಅಧಿಕಾರಿಯುತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳವರ ನ್ಯಾಯಾಲಯ**
**ಮಂಡ್ಯ ವಿಭಾಗ, ಮಂಡ್ಯ**
**ಅರಣ್ಯ ಮೊಕದ್ದಮೆ ಸಂಖ್ಯೆ:04/07–08, ದಿನಾಂಕ:25ನೇ ಜೂನ್, 2010**

**ಉಪಸ್ಥಿತಿ:** ಕೆ.ಹೆಚ್.ವಿನಯ್‌ಕುಮಾರ್, ಭಾ.ಅ.ಸೇ,. ಅಧಿಕಾರಿಯುತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಮಂಡ್ಯ ವಿಭಾಗ, ಮಂಡ್ಯ.

| **ಫಿರ್ಯಾಧಿದಾರರು** | **ವಿರುದ್ಧ** | **ಅರ್ಜಿದಾರರು** |
|---|---|---|
| ಜೆ.ಎಸ್.ಶ್ರೀಕಂಠಮೂರ್ತಿ,<br>ಆರಕ್ಷಕ ವೃತ್ತ ನಿರೀಕ್ಷಕರು,<br>ಮಂಡ್ಯನಗರ ವೃತ್ತ, ಮಂಡ್ಯ. | | ಸೈಯದ್ ಇಸ್ಕೋ<br>ಬಿನ್ ಲೇಟ್ ಮಹಬೂಬ್ ಸಾಬ್,<br>ಜೋನಿಗರ ಬೀದಿ, ಶ್ರೀರಂಗಪಟ್ಟಣ , ಮಂಡ್ಯಜಿಲ್ಲೆ. |
| **ಫಿರ್ಯಾಧಿದಾರರ ಪರ ವಕೀಲರು** | | **ಅರ್ಜಿದಾರರ ಪರ ವಕೀಲರು** |
| ಶಿವಣ್ಣ,<br>ಸಹಾಯಕ ಸರ್ಕಾರಿ ಅಭಿಯೋಗ ನಿರ್ದೇಶಕರು,<br>ಮಂಡ್ಯ | | |

**ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 71ಎ ಮೇರೆಗೆ ಸಂಬಂಧಿಸಿದ ಆದೇಶ.**

**1. ಪ್ರಸ್ತಾವನೆ:**

ದಿನಾಂಕ:25/01/2008 ರಂದು ಬೆಳಗಿನ ಜಾವ ಸಿಟಿಎ–7859ರ 407 ವಾಹನದಲ್ಲಿ ಮೈಸೂರು–ಬೆಂಗಳೂರು ರಸ್ತೆಯಲ್ಲಿ ಅಕ್ರಮವಾಗಿ ಶ್ರೀಗಂಧದ ತುಂಡುಗಳು ಸಾಗಾಣಿಕೆಯಾಗುತ್ತಿರುವುದನ್ನು ಪತ್ತೆ ಹಚ್ಚಿ ಮಂಡ್ಯ ಪಶ್ಚಿಮ ಠಾಣೆಯಲ್ಲಿ

ಅಪರಾಧ ಪ್ರಕರಣ ಸಂಖ್ಯೆ:16/08ರಲ್ಲಿ ಕರ್ನಾಟಕ ಅರಣ್ಯ ಕಾಯ್ದೆ 86, 87 ಮತ್ತು ಭಾರತೀಯ ದಂಡ ಸಂಹಿತೆ 379ರ ರೀತ್ಯಾ ಪ್ರಕರಣ ದಾಖಲಿಸಿಕೊಂಡು ಮುಂದಿನ ಕ್ರಮಕ್ಕಾಗಿ ನ್ಯಾಯಾಲಯದ ಆದೇಶ ಕೋರಿ ವಾಹನ ಸಿಟಿಎ-7859ರ 407 ಸರಕು ಸಾಗಾಣಿಕೆ ವಾಹನ ಹಾಗೂ 533 ಕೆ.ಜಿ ಶ್ರೀಗಂಧದ ತುಂಡುಗಳು, 672 ಸಂಖ್ಯೆ ವಿವಿಧ ಕಂಪನಿಯ ತಂಪು ಪಾನೀಯ ಖಾಲಿ ಬಾಟಲಿಗಳನ್ನು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯಸಂರಕ್ಷಣಾಧಿಕಾರಿ, ಮಂಡ್ಯ ವಿಭಾಗ, ಮಂಡ್ಯರವರಿಗೆ ಫಿರ್ಯಾದಿದಾರರು ವರದಿ ಮೂಲಕ ಕರ್ನಾಟಕ ಅರಣ್ಯ ಕಾಯ್ದೆ 71ಎ ಮೇರೆಗೆ ಕ್ರಮಕೈಗೊಳ್ಳಲು ದಿನಾಂಕ:12/03/2008ರಂದು ಒಪ್ಪಿಸಿರುತ್ತಾರೆ.

ಅಧಿಕಾರಿಯುತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಯವರ ನ್ಯಾಯಾಲಯದಲ್ಲಿ ಅರಣ್ಯ ಅಪರಾಧ ಪ್ರಕರಣ ಸಂಖ್ಯೆ:04/07-08ರಲ್ಲಿ ನೊಂದಾಯಿಸಿಕೊಂಡು ವಿಚಾರಣೆ ಕ್ರಮಕೈಗೊಳ್ಳಲಾಗಿದೆ.

**ವಿಚಾರಣಾ ಹಂತ:**

ವಾಹನ ಸಂಖ್ಯೆ:ಸಿಟಿಎ-7859ರ ಮಾಲೀಕರ ವಿಳಾಸ ಪತ್ತೆ ಮಾಡಲು ಪ್ರಾದೇಶಿಕ ಸಾರಿಗೆ ಅಧಿಕಾರಿ, ಮಂಡ್ಯರವರಿಗೆ ಪತ್ರಬರೆಯಲಾಗಿದ್ದು, Register extract in Respect of Vehical No:CTA-7859 ರ ಪತ್ರವನ್ನು ನೀಡಿರುತ್ತಾರೆ. ಈ ಪತ್ರದಂತೆ ಸಿಟಿಎ-7859ರ ವಾಹನದ ಮಾಲೀಕರು ಸೈಯದ್ ಇಸ್ಕೋ ಬಿನ್ ಲೇಟ್ ಮಹಬೂಬ್ ಸಾಬ್, ಜೋನಿಗರ ಬೀದಿ, ಶ್ರೀರಂಗಪಟ್ಟಣ ಎಂಬುದಾಗಿ ತಿಳಿದುಬಂದಿರುತ್ತದೆ.

ಅಪರಾಧ ಪ್ರಕರಣಕ್ಕೆ ಸಂಬಂಧಿಸಿದಂತೆ ಈ ವಾಹನ ಮಾಲೀಕರ ವಿಳಾಸಕ್ಕೆ ನೊಂದಾಯಿತ ಅಂಚೆ ಸೇವೆಯಲ್ಲಿ ಕರ್ನಾಟಕ ಅರಣ್ಯ ಕಾಯ್ದೆ 71ಬಿ ಮೇರೆಗೆ ನೋಟೀಸ್ ಜಾರಿ ಮಾಡಲಾಯಿತು. ವಿಳಾಸದಾರರು ಮರಣಹೊಂದಿರುತ್ತಾರೆಂದು ಷರಾದೊಂದಿಗೆ ನೊಂದಾಯಿತ ಅಂಚೆ ಪತ್ರಗಳು ಹಿಂದಿರುಗಿರುತ್ತವೆ. ಮಾಲೀಕರ ವಿಳಾಸ ನೀಡಿ ನೋಟಿಸ್ ಜಾರಿ ಮಾಡಲು ನೋಟೀಸನ್ನು ಶ್ರೀರಂಗಪಟ್ಟಣ ವಲಯ ಅರಣ್ಯಾಧಿಕಾರಿಗಳವರ ಮೂಲಕ ಕಳುಹಿಸಿಕೊಡಲಾಗಿದ್ದು ವಲಯ ಅರಣ್ಯಾಧಿಕಾರಿಯವರಿಂದ ವಿಳಾಸದಾರರು ದಿನಾಂಕ:12/04/2007ರಂದು ಮರಣ ಹೊಂದಿರುತ್ತಾರೆಂದು ತಿಳಿಸಿ ಪುರಸಭೆಯು ನೀಡಿರುವ ಮರಣ ಪ್ರಮಾಣ ಪತ್ರದ ನಕಲುಪ್ರತಿಯನ್ನು ಸಲ್ಲಿಸಿರುತ್ತಾರೆ. ಇದರಿಂದ ವಾಹನ ಮಾಲೀಕರು ಮರಣ ಹೊಂದಿರುವುದು ಧೃಢಪಟ್ಟಿರುತ್ತದೆ.

**ಸಾಕ್ಷಿಗಳ ವಿಚಾರಣೆ:**

ಅರಣ್ಯ ಅಪರಾಧ ಪ್ರಕರಣದಲ್ಲಿ ವಿಚಾರಣೆಯನ್ನು ನಡೆಸಲು ಸಾಕ್ಷಿಗಳ ವಿಚಾರಣೆ ನಡೆಸಲಾಗಿದ್ದು ಸಾಕ್ಷಿದಾರರು ತಮ್ಮ ಹೇಳಿಕೆಯನ್ನು ನೀಡಿರುತ್ತಾರೆ. ಪಿಡಬ್ಲ್ಯು-1ರಲ್ಲಿ ಮಂಡ್ಯ ಪಶ್ಚಿಮ ಆರಕ್ಷಕ ಠಾಣಾಧಿಕಾರಿಗಳು ಸಾಕ್ಷಿ ನುಡಿಯುತ್ತಾ, ದಿನಾಂಕ:25/01/08ರಂದು ಬೆಳಗಿನ ಜಾವ ಸುಮಾರು 8-15 ಗಂಟೆಯ ಸಮಯದಲ್ಲಿ ಮಂಡ್ಯ ನಗರ ವೃತ ಪ್ರಭಾರ ಸಿ.ಪಿ.ಐ ವಿ.ಬಿ.ಲಕ್ಷ್ಮೀಗೌಡರವರು ಸಿ.ಟಿ.ಎ-7859 ಟಾಟಾ 407 ವಾಹನದಲ್ಲಿ ಶ್ರೀಗಂಧದ ತುಂಡುಗಳನ್ನು ಮೈಸೂರು ಕಡೆಯಿಂದ ಬೆಂಗಳೂರು ಕಡೆಗೆ ಕಳ್ಳಸಾಗಣೆ ಮಾಡುತ್ತಿದ್ದಾರೆಂದು ಮಾಹಿತಿದಾರರಿಂದ ಬಂದ ಖಚಿತ ಮಾಹಿತಿಯ ಮೇರೆಗೆ ನನ್ನನ್ನು ಸಿಬ್ಬಂದಿಗಳಾದ ಹೆಚ್.ಸಿ.55 ಪಿ.ಸಿ-95, ಪಿಸಿ632, ಪಿಸಿ618, ಪಿಸಿ24, ಪಿಸಿ-373, ಪಿಸಿ-353, ಪಿಸಿ-394, 434, 566, ಪಿಸಿ473 ಹಾಗೂ ಪಂಚಾಯಿತಿದಾರರನ್ನು ಠಾಣೆಗೆ ಕರೆಸಿಕೊಂಡು ಅವರಿಗೆ ಮೇಲ್ಕಂಡ ವಿಷಯವನ್ನು ತಿಳಿಸಿ ಜೊತೆಯಲ್ಲಿ ಕರೆದುಕೊಂಡು ಬೆಳಗಿನ ಜಾವ 2:00 ಗಂಟೆಯಿಂದ ಮಂಡ್ಯ ನಗರದ ಕಲ್ಲಹಳ್ಳಿ ಕ್ರಾಸ್‌ನಲ್ಲಿ ಮೈಸೂರು ಬೆಂಗಳೂರು ಹೆದ್ದಾರಿಯಲ್ಲಿ ಕಾಯುತ್ತಿರುವಾಗ ಬೆಳಗಿನ ಜಾವ 2:30ಗಂಟೆಗೆ ಒಂದು ಟಾಟಾ 407 ಗೂಡ್ಸ್ ವಾಹನ ಸಂಖ್ಯೆ ಸಿಟಿಐ 7859 ಬರುತ್ತಿದ್ದು ಅದನ್ನು ನಿಲ್ಲಿಸುವಂತೆ ಸೂಚನೆ ನೀಡಿದರೂ ಸಹ ವಾಹನವನ್ನು ನಿಲ್ಲಿಸದೇ ಮುಂದೆ ಹೋಗಲು ಪ್ರಯತ್ನಿಸಿದಾಗ ಪೋಲಿಸ್ ಜೀಪ್ ನಂ:ಕೆ.ಎ-11 ಜಿ 209 ಮತು ಕೆ.ಎ11 ಜಿ 103 ಗಳಲ್ಲಿ ಹಿಂಬಾಲಿಸಿ ಕಲ್ಲಹಳ್ಳಿ ಕ್ರಾಸ್‌ನಲ್ಲಿರುವ ರಸ್ತೆಯ ಉಬ್ಬಿನ ಬಳಿ ತಡೆದು ವಾಹನದ ಚಾಲಕ ಹಾಗೂ ವಾಹನದ ಹಿಂಭಾಗದ ಒಳಗಡೆ ಇದ್ದ ಇಬ್ಬರು ಆಸಾಮಿಗಳನ್ನು ಹಿಡಿದು ಪರಿಶೀಲಿಸಿದಾಗ ವಾಹನದ ಹಿಂಬದಿಯಲ್ಲಿ ವಿವಿಧ ತಂಪು ಪಾನೀಯಗಳ ಖಾಲಿ ಬಾಟಲ್‌ಗಳನ್ನು ಕ್ರೇಟ್‌ಗಳನ್ನು ಜೋಡಿಸಿದ್ದು ಒಳಭಾಗದಲ್ಲಿ ಕಾಣಿಸದ ಹಾಗೇ ಪ್ಲಾಸ್ಟಿಕ್ ಹಾಗೂ ಗೋಣಿಚೀಲದಲ್ಲಿ ಶ್ರೀಗಂಧದ ತುಂಡು ಹಾಗೂ ಶ್ರೀಗಂಧದ ಚಕ್ಕೆಯನ್ನು ಕಳ್ಳಸಾಗಾಣಿಕೆ ಮಾಡುತ್ತಿದ್ದುದು ಕಂಡುಬಂದಿದ್ದು ಚಾಲಕನ ಹೆಸರು ವಿಚಾರಿಸಲಾಗಿ ಪತೇ ಮಹಮ್ಮದ್ ಖಾನ್ ಅಲಿಯಾಸ್ ಫತೇಖಾನ್ ಬಿನ್ ಲೇಟ್ ಖಾಯರ್ ಮಹಮ್ಮದ್ ಖಾನ್, 55 ವರ್ಷ ಮುಸ್ಲಿಂ ಜನಾಂಗ, ಲಾರಿಡ್ರೈವರ್, ವಾಸ ಮನೆನಂ:148, 2ನೇಕ್ರಾಸ್, ಸಾದತ್ ಮೊಹಲ್ಲಾ, ಗುತ್ತಲು ಕಾಲೋನಿ ಮಂಡ್ಯ ಸಿಟಿ ಎಂದು ತಿಳಿಸಿದ್ದು ವಾಹನದ ಹಿಂಭಾಗ ಒಳಭಾಗದಲ್ಲಿ ಕುಳಿತಿದ್ದ ಅಸಾಮಿಗಳ ಹೆಸರು ವಿಳಾಸವನ್ನು ಕೇಳಲಾಗಿ ಒಬ್ಬ ಬಾಬು ಬಿನ್ ಲೇಟ್ ಮೊಹಮ್ಮದ್ ಇಬ್ರಾಹಿಂ,

30 ವರ್ಷ, ಮುಸ್ಲಿಂ ಅಟೋ ಚಾಲಕ, ಮನೆ ನಂ:34, 3ನೇ ಕ್ರಾಸ್, ಇಂದಿರಾಗಾಂಧಿ ರಸ್ತೆ, ಶಾಂತಿನಗರ ಮೈಸೂರು ಸಿಟಿ ಎಂತಲೂ ಮತ್ತೊಬ್ಬ ಯಾಕೂಬ್ ಖಾನ್, ಅಲಿಯಾಸ್ ಯಾಕೂಬ್ ಬಿನ್ ಲೇಟ್ ರಸೂಲ್ ಖಾನ್, 36 ವರ್ಷ, ಮುಸ್ಲಿಂ ಜನಾಂಗ ಚಿಲ್ಲರೆ ಅಂಗಡಿ ವ್ಯಾಪಾರಿ, ವಾಸ ಮನೆ ನಂ:457 6ನೇ ಕ್ರಾಸ್, ಶಾಂತಿನಗರ ಮೈಸೂರು ಸಿಟಿ ಎಂದು ತಿಳಿಸಿದರು. ಮೇಲ್ಕಂಡ ಆಸಾಮಿಗಳು ಬೆಲೆಬಾಳುವ ಶ್ರೀಗಂಧದ ಮರದ ತುಂಡುಗಳು ಮತ್ತು ಚಕ್ಕೆಯನ್ನು ಸಾಗಾಣಿಕೆ ಮಾಡಲು ಪರವಾನಗಿಯ ಬಗ್ಗೆ ವಿಚಾರಿಸಲಾಗಿ ಯಾವುದೇ ಪರವಾನಗಿಯನ್ನು ಹಾಜರ್‌ಪಡಿಸದೇ ಇರುವುದು ಕಳ್ಳಸಾಗಾಣಿಕೆ ಮಾಡುತ್ತಿದ್ದುದರಿಂದ ಮೂರು ಜನರನ್ನು ಮೇಲ್ಕಂಡ ವಾಹನ ಮತ್ತು ಹನ್ನೊಂದು ಚೀಲಗಳಲ್ಲಿದ್ದ ಶ್ರೀಗಂಧದ ತುಂಡುಗಳು ಮತ್ತು 2 ಚೀಲ ಗಂಧದ ಚಕ್ಕೆಯ ಸಮೇತ ವಶಕ್ಕೆ ತೆಗೆದುಕೊಂಡು ಸದರಿ ಸ್ಥಳ ಮೈಸೂರು ಬೆಂಗಳೂರು ಹೆದ್ದಾರಿಯಾಗಿದ್ದು ಹೆಚ್ಚಿನ ವಾಹನ ಸಂಚರಿಸುತ್ತಿದ್ದುದರಿಂದ ಸಂಚಾರ ವ್ಯವಸ್ಥೆಗೆ ಅಡಚಣೆ ಉಂಟಾಗುತ್ತಿದ್ದುದರಿಂದ ಶ್ರೀಗಂಧದ ತುಂಡುಗಳ ಸಮೇತವಿರುವ ವಾಹನವನ್ನು ಪಂಚರ ಸಮಕ್ಷಮ ಬೆಳಗಿನ ಜಾವ 2:45 ಗಂಟೆಗೆ ಮಂಡ್ಯ ಪಶ್ಚಿಮ ಠಾಣೆಯ ಹತ್ತಿರ ತೆಗೆದುಕೊಂಡು ಬಂದು ಸಿಟಿಎ 7859 ಟಾಟಾ 407 ವಾಹನದಲ್ಲಿದ್ದ ಶ್ರೀಗಂಧದ ತುಂಡುಗಳ ಚೀಲಗಳನ್ನು ಪಂಚರ ಸಮಕ್ಷಮ ಹೊರತೆಗೆದು ಪ್ರತಿ ಚೀಲದಲ್ಲಿ ಗಂಧದ ತುಂಡುಗಳನ್ನು ಪರಿಶೀಲಿಸಿ ತೂಕ ಮಾಡಿಸಿ ಪ್ರತಿ ಚೀಲಕ್ಕೆ ಕ್ರಮ ಸಂಖ್ಯೆಯನ್ನು ನೀಡಿ ತೂಕದ ವಿವರವನ್ನು ನಮೂದಿಸಿ ವಿವರವಾದ ಪಂಚನಾಮೆಯನ್ನು ಬರೆದು ಆರೋಪಿಗಳು ಗಂಧವನ್ನು ಸಾಗಾಣಿಕೆ ಮಾಡುತ್ತಿದ್ದುದು ಕಾನೂನು ಬಾಹಿರವಾದ್ದರಿಂದ ಸಿಟಿಎ 7859 ಟಾಟಾ 407 ವಾಹನವನ್ನು ಹನ್ನೊಂದು ಚೀಲದಲ್ಲಿರುವ ಶ್ರೀಗಂಧದ ತುಂಡುಗಳನ್ನು 2 ಚೀಲದಲ್ಲಿರುವ ಶ್ರೀಗಂಧದ ಚಕ್ಕೆಯನ್ನು ಹಾಗೂ ವಿವಿಧ ಮಾದರಿಯ ತಂಪು ಪಾನೀಯ ಖಾಲಿ ಬಾಟಲಿ ಇರುವ 28 ಕ್ರೇಟ್‌ಗಳನ್ನು ಪಂಚರ ಸಮಕ್ಷಮ ಅಮಾನತ್ತುಪಡಿಸಿಕೊಂಡಿದ್ದು, ಶ್ರೀಗಂಧದ ತುಂಡುಗಳು ಅಂದಾಜು ಬೆಲೆ 9.5 ಲಕ್ಷರೂ ಹಾಗೂ ವಾಹನದ ಬೆಲೆ 2 ಲಕ್ಷರೂ ಒಟ್ಟು 11.5 ಲಕ್ಷ ರೂ ಮೌಲ್ಯವಾಗಿರುತ್ತದೆ. ಮೇಲ್ಕಂಡ ಆರೋಪಿತರು ಯಾವುದೇ ಪರವಾನಗಿ ಇಲ್ಲದೇ ಸಿಟಿಎ 7859 ಟಾಟಾ 407 ವಾಹನದಲ್ಲಿ ಶ್ರೀಗಂಧದ ತುಂಡು ಹಾಗೂ ಚಕ್ಕೆಯನ್ನು ಕಳ್ಳಸಾಗಾಣಿಕೆ ಮಾಡುತ್ತಿದ್ದುದರಿಂದ ಸದರಿಯವರ ವಿರುದ್ದ ಕಲಂ 86 87 ಕರ್ನಾಟಕ ಅರಣ್ಯ ಕಾಯ್ದೆ ಜೊತೆ 379 ಐಪಿಸಿ ರೀತ್ಯಾ ಮೊಕದ್ದಮೆ ದಾಖಲು ಮಾಡಿ ಕ್ರಮಕೈಗೊಳ್ಳಲಾಗುವುದೆಂದು ಪ್ರಭಾರ ಆರಕ್ಷಕ ವೃತ್ತ ನಿರೀಕ್ಷಕರು ನೀಡಿದ ವರದಿಯನ್ನು ಸ್ವೀಕರಿಸಿ ಬೆಳಿಗ್ಗೆ 7:00ಗಂಟೆಗೆ ಠಾಣಾ ಮೊಕದ್ದಮೆ ನಂ:16/2008 ಕಲಂ 86, 87 ಕೆ.ಎಫ್ ಆಕ್ಟ್ 379 ಐಪಿಸಿ ರೀತ್ಯಾ ಮೊಕದ್ದಮೆ ದಾಖಲಿಸಿರುತ್ತೇನೆ ದಾಖಲಿಸಿ ವರದಿಗಳನ್ನು ಮಾನ್ಯ ನ್ಯಾಯಾಲಯಕ್ಕೂ ಹಾಗೂ ಮೇಲಾಧಿಕಾರಿಗಳಿಗೂ ರವಾನಿಸಿಕೊಂಡಿರುತ್ತೇನೆ.

ಪಂಚನಾಮೆ ಸಂದರ್ಭದಲ್ಲಿ ಹಾಜರಿದ್ದು ಪಂಚನಾಮೆಗೆ ನಾನೂ ಸಹ ಸಹಿ ಮಾಡಿರುತ್ತೇನೆ. ಪಂಚನಾಮೆಯನ್ನು ನಿಶಾನೆ ಪಿ1 ಎಂದು ಅದರ ಸಾಕ್ಷಿ ಸಹಿಯನ್ನು ನಿಶಾನೆ ಪಿ1ಎ ಎಂದು ಗುರುತಿಸಿರುತ್ತೇನೆ ಹಾಗೂ ಪ್ರಥಮ ವರ್ತಮಾನದ ವರದಿಯನ್ನು ಸಲ್ಲಿಸಿದ್ದು ಅದನ್ನು ನಿಶಾನೆ ಪಿ2 ಮತ್ತು ಅದರ ಸಾಕ್ಷಿ ಸಹಿಯನ್ನು ನಿಶಾನೆ ಪಿ2ಎ ಎಂದು ಗುರುತಿಸಿರುತ್ತೇನೆ. ಹಾಗೂ ಅಮಾನತ್ತುಪಡಿಸಿಕೊಂಡ ಮಾಲುಗಳನ್ನು ಮಾಲು ಪಟ್ಟಿಸಂಖ್ಯೆ 8/2008ರಲ್ಲಿ ನಮೂದಿಸಿ ಮಾನ್ಯ ನ್ಯಾಯಾಲಯದ ಅನುಮತಿ ಪಡೆದುಕೊಂಡಿರುತ್ತೇನೆ. ಪಿ.ಎಫ್.8/2008ರ ವರದಿಯನ್ನು ಮಾನ್ಯ ನ್ಯಾಯಾಲಯಕ್ಕೆ ವಹಿಸಿಕೊಡಲಾಗಿದ್ದು ಈ ವರದಿಯನ್ನು ನಿಶಾನೆ ಪಿ3 ಹಾಗೂ ಇದರ ಸಾಕ್ಷಿ ಸಹಿಯನ್ನು ನಿಶಾನೆ ಪಿ3ಎ ಎಂದು ಗುರುತಿಸಿರುತ್ತೇನೆ. ಹಾಗೂ ಅದೇ ದಿವಸ ಆರೋಪಿಗಳಾದ ಪತೇ ಮಹಮ್ಮದ್ ಖಾನ್, ಬಾಬು, ಯಾಕೂಬ್ ಖಾನ್ ರವರುಗಳ ಸ್ವಇಚ್ಛಾ ಹೇಳಿಕೆಯನ್ನು ದಾಖಲು ಮಾಡಿಕೊಂಡಿರುತ್ತೇನೆ. ಆರೋಪಿ ಫತೇ ಮಹಮ್ಮದ್ ಖಾನ್ ಇವರ ಸ್ವಇಚ್ಛಾ ಹೇಳಿಕೆಯನ್ನು ದಾಖಲು ಮಾಡಿಕೊಳ್ಳಲಾಗಿದ್ದು ಸದರಿ ಸ್ವಇಚ್ಛಾ ವರದಿಯನ್ನು ನಿಶಾನೆ ಪಿ4 ಎಂದು ಮತ್ತು ಅದರ ಸಾಕ್ಷಿ ಸಹಿಯನ್ನು ನಿಶಾನೆ ಪಿ4ಎ ಎಂದು ಗುರುತಿಸಿರುತ್ತೇನೆ. ಮತ್ತೊಬ್ಬ ಆರೋಪಿಯಾದ ಬಾಬು ಬಿನ್ ಲೇಟ್ ಮಹಮ್ಮದ್ ಇಬ್ರಾಹಿಂ ಇವರ ಸ್ವಇಚ್ಛಾ ಹೇಳಿಕೆಯನ್ನು ಪಡೆದು ಇದರ ಮೇಲುಸಹಿಯನ್ನು ಗುರುತಿಸಿರುತ್ತೇನೆ ಸದರಿಯವರ ಸ್ವಇಚ್ಛಾ ಹೇಳಿಕೆಯನ್ನು ನಿಶಾನೆ ಪಿ5 ಎಂದು ಮತ್ತು ಅದರ ಸಾಕ್ಷಿ ಸಹಿಯನ್ನು ನಿಶಾನೆ ಪಿ5ಎ ಎಂದು ಗುರುತಿಸಿರುತ್ತೇನೆ. ಮತ್ತೊಬ್ಬ ಆರೋಪಿ ಯಾಕೂಬ್‌ಖಾನ್ ಇವರ ಸ್ವಇಚ್ಛಾ ಹೇಳಿಕೆಯನ್ನು ಪಡೆಯಲಾಗಿದ್ದು ಇದರ ಮೇಲುಸಹಿಯನ್ನು ಗುರುತಿಸಿರುತ್ತೇನೆ. ಸ್ವಇಚ್ಛಾ ಹೇಳಿಕೆಯನ್ನು ನಿಶಾನೆ ಪಿ6 ಎಂದು ಮತ್ತು ಅದರ ಮೇಲು ಸಹಿಯನ್ನು ನಿಶಾನೆ ಪಿ6ಎ ಎಂದು ಗುರುತಿಸಿರುತ್ತೇನೆ. ಹಾಗೂ ಅದೇ ದಿವಸ ಸಾಕ್ಷಿದಾರರಾದ ಹೆಚ್.ಸಿ.55 ಕೆ.ಶಂಕರಯ್ಯ, ಪಿ.ಸಿ.95 ಎನ್.ರಾಮಲಿಂಗಯ್ಯ, ಪಿ.ಸಿ.632, ಕೆ.ಸಿ.ನಟರಾಜು, ಪಿ.ಸಿ.373, ಡಿ.ಎನ್.ತಿಲಕ್‌ಕುಮಾರ್, ಸಿ.ಸಿ.353, ಕೆ.ಎ. ಶಿವಣ್ಣ, ಪಿ.ಸಿ.394, ಜಿ.ಗಣೇಶ್‌ಬಾಬು, ಪಿ.ಸಿ .434 ಎಸ್.ಬಿ.ಶ್ರೀರಾಮ, ಪಿ.ಸಿ.24 ಟಿ.ಲಿಂಗರಾಜು, ಪಿ.ಸಿ.618 ಬಿ.ಚಿಕ್ಕಯ್ಯ, ಪಿ.ಸಿ.566, ಕೆ.ಸಿ.ದೇವರಾಜು, ಪಿ.ಸಿ.473, ಎಲ್.ಕೃಷ್ಣಯ್ಯ, ರವರುಗಳ ಹೇಳಿಕೆಯನ್ನು ದಾಖಲು ಮಾಡಿರುತ್ತೇನೆ. ಸದರಿ

ಸಾಕ್ಷಿದಾರರ ಹೇಳಿಕೆಗಳನ್ನು ಪಡೆಯಲಾಗಿದ್ದು ಹೆಚ್.ಸಿ.55 ಕೆ.ಶಂಕರಯ್ಯ ಇವರ ಸಾಕ್ಷಿ ಸಹಿಯ ಮೇಲುಸಹಿಯನ್ನು ಗುರುತಿಸಿರುತ್ತೇನೆ ಸದರಿ ವರದಿಯನ್ನು ನಿಶಾನೆ ಪಿ7 ಎಂದು ಗುರುತಿಸಿರುತ್ತೇನೆ ಮತ್ತು ಅದರ ಸಾಕ್ಷಿ ಸಹಿಯನ್ನು ನಿಶಾನೆ ಪಿ7ಎ ಎಂದು ಗುರುತಿಸಿರುತ್ತೇನೆ. ಎನ್.ರಾಮಲಿಂಗಯ್ಯ, ಸಿ.ಪಿ.ಸಿ 95 ರ ಸಾಕ್ಷಿ ಹೇಳಿಕೆಯನ್ನು ಪಡೆಯಲಾಗಿದ್ದು ನಿಶಾನೆ ಪಿ8 ರಲ್ಲಿ ಹೇಳಿಕೆಯನ್ನು ಗುರುತಿಸಲಾಗಿದ್ದು ಇವರ ಮೇಲುಸಹಿಯನ್ನು ನಿಶಾನೆ ಪಿ8ಎರಲ್ಲಿ ಗುರುತಿಸಿರುತ್ತೇನೆ. ಪಿ.ಸಿ.632 ಕೆ.ಸಿ.ನಟರಾಜುರ ಸಾಕ್ಷಿ ಹೇಳಿಕೆಯನ್ನು ನಿಶಾನೆ ಪಿ9 ರಲ್ಲಿ ಗುರುತಿಸಲಾಗಿದ್ದು ಇವರ ಮೇಲು ಸಹಿಯನ್ನು ನಿಶಾನೆ ಪಿ9ಎ ರಲ್ಲಿ ಗುರುತಿಸಿರುತ್ತೇನೆ. ಪಿ.ಸಿ.373 ಬಿ.ಎನ್.ತಿಲಕ್‌ಕುಮಾರ್ ಸಾಕ್ಷಿ ಹೇಳಿಕೆಯನ್ನು ನಿಶಾನೆ ಪಿ10 ರಲ್ಲಿ ಗುರುತಿಸಲಾಗಿದ್ದು ಇವರ ಮೇಲು ಸಹಿಯನ್ನು ನಿಶಾನೆ ಪಿ10ಎ ರಲ್ಲಿ ಗುರುತಿಸಿರುತ್ತೇನೆ. ಪಿ.ಸಿ.353 ಕೆ.ಎ.ಶಿವಣ್ಣರ ಸಾಕ್ಷಿ ಹೇಳಿಕೆಯನ್ನು ನಿಶಾನೆ ಪಿ11 ರಲ್ಲಿ ಗುರುತಿಸಲಾಗಿದ್ದು ಇವರ ಮೇಲು ಸಹಿಯನ್ನು ನಿಶಾನೆ ಪಿ11ಎ ರಲ್ಲಿ ಗುರುತಿಸಿರುತ್ತೇನೆ. ಪಿ.ಸಿ394 ಜಿ.ಗಣೇಶ್‌ಬಾಬು ಸಾಕ್ಷಿ ಹೇಳಿಕೆಯನ್ನು ನಿಶಾನೆ ಪಿ12 ರಲ್ಲಿ ಗುರುತಿಸಲಾಗಿದ್ದು ಇವರ ಮೇಲು ಸಹಿಯನ್ನು ನಿಶಾನೆ ಪಿ12ಎ ರಲ್ಲಿ ಗುರುತಿಸಿರುತ್ತೇನೆ. ಪಿ.ಸಿ.434 ಎಸ್.ಬಿ.ಶ್ರೀರಾಮರವರ ಸಾಕ್ಷಿ ಹೇಳಿಕೆಯನ್ನು ನಿಶಾನೆ ಪಿ13 ರಲ್ಲಿ ಗುರುತಿಸಲಾಗಿದ್ದು ಇವರ ಮೇಲು ಸಹಿಯನ್ನು ನಿಶಾನೆ ಪಿ13ಎ ರಲ್ಲಿ ಗುರುತಿಸಿರುತ್ತೇನೆ. ಪಿ.ಸಿ.24 ಟಿ.ಲಿಂಗರಾಜು ಸಾಕ್ಷಿ ಹೇಳಿಕೆಯನ್ನು ನಿಶಾನೆ ಪಿ14 ರಲ್ಲಿ ಗುರುತಿಸಲಾಗಿದ್ದು ಇವರ ಮೇಲು ಸಹಿಯನ್ನು ನಿಶಾನೆ ಪಿ14ಎ ರಲ್ಲಿ ಗುರುತಿಸಿರುತ್ತೇನೆ. ಪಿ.ಸಿ.618 ಬಿ.ಚಿಕ್ಕಯ್ಯ ಸಾಕ್ಷಿ ಹೇಳಿಕೆಯನ್ನು ನಿಶಾನೆ ಪಿ15 ರಲ್ಲಿ ಗುರುತಿಸಲಾಗಿದ್ದು ಇವರ ಮೇಲು ಸಹಿಯನ್ನು ನಿಶಾನೆ ಪಿ15ಎ ರಲ್ಲಿ ಗುರುತಿಸಿರುತ್ತೇನೆ. ಪಿ.ಸಿ.566 ಕೆ.ಸಿ.ದೇವರಾಜು ಸಾಕ್ಷಿ ಹೇಳಿಕೆಯನ್ನು ನಿಶಾನೆ ಪಿ16 ರಲ್ಲಿ ಗುರುತಿಸಲಾಗಿದ್ದು ಇವರ ಮೇಲು ಸಹಿಯನ್ನು ನಿಶಾನೆ ಪಿ16ಎ ರಲ್ಲಿ ಗುರುತಿಸಿರುತ್ತೇನೆ. ಪಿ.ಸಿ.473 ಎಲ್.ಕೃಷ್ಣಯ್ಯ ಸಾಕ್ಷಿ ಹೇಳಿಕೆಯನ್ನು ನಿಶಾನೆ ಪಿ17 ರಲ್ಲಿ ಗುರುತಿಸಲಾಗಿದ್ದು ಇವರ ಮೇಲು ಸಹಿಯನ್ನು ನಿಶಾನೆ ಪಿ17ಎ ರಲ್ಲಿ ಗುರುತಿಸಿರುತ್ತೇನೆ. ಹಾಗೂ ಸಾಕ್ಷಿದಾರರಾದ ಎಸ್.ಸೋಮಶೇಖರ್ ಬಿನ್ ಲೇಟ್ ಸಿದ್ದಯ್ಯ ಸತೀಶ್ ಬಿನ್ ಶ್ರೀನಿವಾಸ ಬಿ.ಸಿ.ಜಗದೀಶ್ ಬಿನ್ ಚಿಕ್ಕಣ್ಣರವರ ಹೇಳಿಕೆಗಳನ್ನು ದಾಖಲು ಮಾಡಿಕೊಂಡಿರುತ್ತೇನೆ. ಎಸ್.ಸೋಮಶೇಖರ್ ಬಿನ್ ಲೇಟ್ ಸಿದ್ದಯ್ಯ ರವರ ಸಾಕ್ಷಿ ಹೇಳಿಕೆಯನ್ನು ನಿಶಾನೆ 18 ಹಾಗೂ ಇವರ ಮೇಲುಸಹಿಯನ್ನು ನಿಶಾನೆ 18ಎ ಎಂದು ಗುರುತಿಸಿರುತ್ತೇನೆ. ಸತೀಶ್ ಬಿನ್ ಶ್ರೀನಿವಾಸ್ ರವರ ಸಾಕ್ಷಿ ಹೇಳಿಕೆಯನ್ನು ನಿಶಾನೆ ಪಿ19 ಹಾಗೂ ಇವರ ಮೇಲುಸಹಿಯನ್ನು ನಿಶಾನೆ ಪಿ19ಎ ಎಂದು ಗುರುತಿಸಿರುತ್ತೇನೆ. ಹಾಗೂ ಬಿ.ಸಿ.ಜಗದೀಶ್ ಬಿನ್ ಚಿಕ್ಕಣ್ಣರವರ ಸಾಕ್ಷಿ ಹೇಳಿಕೆಯನ್ನು ನಿಶಾನೆ ಪಿ20 ಹಾಗೂ ಇವರ ಮೇಲುಸಹಿಯನ್ನು ನಿಶಾನೆ ಪಿ20ಎ ಎಂದು ಗುರುತಿಸಿರುತ್ತೇನೆ.

ಈ ಪ್ರಕರಣದ ಆರೋಪಿಗಳನ್ನು ದಸ್ತಗಿರಿ ಮಾಡಿ ಆರೋಪಿಗಳನ್ನು ಮಾನ್ಯ ನ್ಯಾಯಾಲಯಕ್ಕೆ ಹಾಜರ್‌ಪಡಿಸಿರುತ್ತೇನೆ. ಮಾನ್ಯ ನ್ಯಾಯಾಲಯವು ನ್ಯಾಯಾಂಗ ಬಂಧನಕ್ಕೆ ಆದೇಶ ಮಾಡಿರುತ್ತದೆ. ಹಾಗೂ ದಿನಾಂಕ:11/02/2008ರಂದು ಬೆಳಿಗ್ಗೆ 08:30 ಗಂಟೆಗೆ ಅಧೀಕ್ಷಕರು ಜಿಲ್ಲಾ ಕೇಂದ್ರ ಉಪಕಾರಾಗೃಹ ಮಂಡ್ಯರವರು ಠಾಣೆಗೆ ಹಾಜರಾಗಿ ಕೈದಿ ಸಂಖ್ಯೆ:7182 ಫತೇ ಮಹಮದ್ ಖಾನ್ ಬಿನ್ ಲೇಟ್ ಖಾಯರ್ ಮಹಮ್ಮದ್ ಖಾನ್ ಈತನು ಮೃತನಾದ ಬಗ್ಗೆ ಠಾಣೆಗೆ ಹಾಜರಾಗಿ ನೀಡಿದ ಲಿಖಿತ ದೂರನ್ನು ಸ್ವೀಕರಿಸಿ ಠಾಣಾ ನಂ:2/08 ಕಲಂ174 ಸಿಆರ್ ರೀತ್ಯಾ ಕೇಸು ದಾಖಲಿಸಿರುತ್ತೇನೆ. ಹಾಗೂ ಈತನ ಸಾವಿನ ಬಗ್ಗೆ ಜಿಲ್ಲಾಸ್ಪತ್ರೆ ಮಂಡ್ಯರವರು ನೀಡಿದ ಶವ ಪರೀಕ್ಷಾ ವರದಿಯನ್ನು ಸ್ವೀಕರಿಸಿಕೊಂಡಿರುತ್ತೇನೆ. ಹಾಗೂ ಮಾಲುಪಟ್ಟಿಸಂಖ್ಯೆ:8/08ರಲ್ಲಿ ಇದ್ದ ಮಾಲುಗಳನ್ನು ದಿನಾಂಕ:12/03/2008ರಂದು ಅಧಿಕೃತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಮಂಡ್ಯರವರ ಆದೇಶದ ಪ್ರಕಾರ ಈ ಕೆಳಕಂಡ ವಾಹನ ಹಾಗೂ ಶ್ರೀಗಂಧದ ಮಾಲುಗಳ ವಿವರ ಈ ಕೆಳಕಂಡಂತಿದೆ.

| ಕ್ರ. ಸಂ. | ಚೀಲದ ಸಂಖ್ಯೆ | ತುಂಡುಗಳ ಸಂಖ್ಯೆ | ಮಹಜರ್‌ನಲ್ಲಿ ಇರುವ ತೂಕ ಕೆ.ಜಿ.ಗಳಲ್ಲಿ | ಈಗಿನ ತೂಕ ಕೆ.ಜಿಗಳಲ್ಲಿ |
|---|---|---|---|---|
| 1 | ಎ | 1–33 | 56.00 | 50.00 |
| 2 | ಬಿ | 1–21 | 47.00 | 39.00 |
| 3 | ಸಿ | 1–29 | 53.00 | 48.00 |
| 4 | ಖ | 1–34 | 61.00 | 54.00 |
| 5 | ಇ | 1–21 | 33.00 | 25.00 |
| 6 | ಎಫ್ | 1–27 | 52.00 | 50.00 |
| 7 | ಜಿ | 1–30 | 59.00 | 55.00 |

| | | | | |
|---|---|---|---|---|
| 8 | ಹೆಚ್. | 1–11 | 20.00 | 19.00 |
| 9 | ಐ | 1–30(29) | 55.00 | 45.00 ಒಂದು ಸ್ಟ್ಯಾಂಪ್ ಪೀಸ್ ಹೊರತುಪಡಿಸಿ |
| 10 | ಜೆ | 1–28 | 51.00 | 48.00 |
| 11 | ಕೆ. | 1–33 | 63.00 | 60.00 |
| | | ಒಟ್ಟು | **550.00** | **493.00** |

**2. ಪ್ಲಾಸ್ಟಿಕ್ ಕೊರೆ ಚೀಲಗಳು**

| | | | | |
|---|---|---|---|---|
| 1. | ಗಂಧದ ಚಕ್ಕೆ | | 20.00 | 20.00 |
| 2. | ಗಂಧದ ಚಕ್ಕೆ | | 20.00 | 20.00 |
| ಒಟ್ಟು | | | **40.00** | **40.00** |
| ಒಟ್ಟು | | | **590.00** | **533.00** |

| |
|---|
| 3. ಒಂದು ಗಿಣಿ ಹಸಿರುಬಣ್ಣದ 407 ಗೂಡ್ಸ್ ಟೆಂಪೋ ನಂಬರ್ ಸಿಟಿಎ 7859 |
| 4. ವಿವಿಧ ಕಂಪನಿಯ ತಂಪು ಪಾನೀಯ ಖಾಲಿ ಬಾಟಲು ಇವು ಪೆಪ್ಸಿ ಕಂಪನಿಯ ನೀಲಿ ಬಣ್ಣದ 28 ಕ್ರೇಟುಗಳಲ್ಲಿ ಒಟ್ಟು 672 ಇರುತ್ತವೆ. |

ಸದರಿ ಮಾಲುಪಟ್ಟಿಯನ್ನು ನಿಶಾನೆ ಪಿ21 ಎಂದು ಗುರುತಿಸಲಾಯಿತು. ಇವುಗಳನ್ನು ವಲಯ ಅರಣ್ಯಾಧಿಕಾರಿ, ಮಂಡ್ಯರವರಿಗೆ ನೀಡಿ ಸ್ವೀಕೃತಿಯನ್ನು ಪಡೆದು ಮಾನ್ಯ ನಗರ ವೃತ್ತ ನಿರೀಕ್ಷಕರುರವರಿಗೆ ಹಾಜರ್‌ಪಡಿಸಿರುತ್ತೇನೆ ಎಂದು ತಿಳಿಸಿರುತ್ತಾರೆ.

ಫಿರ್ಯಾಧಿದಾರರ ಪರ ಸಹಾಯಕ ಅಭಿಯೋಗ ನಿರ್ದೇಶಕರು ಸದರಿ ವಾಹನವು ಅರಣ್ಯ ಅಪರಾಧ ಪ್ರಕರಣದಲ್ಲಿ ಭಾಗಿಯಾಗಿರುವುದು ಕಂಡುಬಂದಿರುವುದರಿಂದ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ತಿಳಿಸಿರುತ್ತಾರೆ. ವಾಹನ ಮಾಲೀಕರು ಮರಣ ಹೊಂದಿರುವುದರಿಂದ ಹಾಗೂ ವಾಹನದ ಬಗ್ಗೆ ಅಧಿಕಾರ ಇರುವ ಇತರ ಯಾವುದೇ ವ್ಯಕ್ತಿಗಳಾಗಲೀ ಖುದ್ದಾಗಿಯೇ ಆಗಲೀ ಅಥವಾ ತಮ್ಮ ವಕೀಲರ ಮೂಲಕವಾಗಲೀ ನ್ಯಾಯಾಲಯಕ್ಕೆ ಹಾಜರಾಗಿ ಹೇಳಿಕೆ ನೀಡಿರುವುದಿಲ್ಲ.

**ಪರಿಶೀಲನಾಂಶಗಳು:**

ಈ ಅರಣ್ಯ ಅಪರಾಧ ಪ್ರಕರಣಕ್ಕೆ ಸಂಬಂಧಿಸಿದಂತೆ ದಾಖಲಾತಿಗಳು ಸಾಕ್ಷಿದಾರರ ಹೇಳಿಕೆ, ಗುರುತಿಸಲಾದ ನಿಶಾನೆಗಳು ಹಾಗೂ ಮುದ್ದೆಮಾಲುಗಳನ್ನು ವಿಶ್ಲೇಷಿಸಿದಾಗ ಸಿಟಿಎ–7859ರ ವಾಹನವು ಅಕ್ರಮವಾಗಿ ಶ್ರೀಗಂಧದ ತುಂಡುಗಳನ್ನು ಸಾಗಾಣಿಕೆ ಮಾಡುವುದರಲ್ಲಿ ಭಾಗಿಯಾಗಿರುವುದು ಧೃಢಪಟ್ಟಿರುತ್ತದೆ. ಇದರಿಂದ ಈ ಕೆಳಗಿನ ಪರಿಶೀಲನಾಂಶಗಳು ಮೂಡಿಬಂದಿರುತ್ತವೆ.

2. ಫಿರ್ಯಾಧಿದಾರರು ಅರಣ್ಯ ಅಪರಾಧ ಪ್ರಕರಣದಲ್ಲಿ ಜಪ್ತಿ ಮಾಡಲಾದ ವಾಹನ ಭಾಗಿಯಾಗಿರುವುದರ ಬಗ್ಗೆ ಸಾಬೀತು ಪಡಿಸಿದ್ದಾರೆಯೇ ?
3. ವಾಹನ ಮಾಲೀಕರಾಗಲೀ ಅಥವಾ ಅದಕ್ಕೆ ಸಂಬಂಧಿಸಿದ ಇತರರಾಗಲೀ ಅಪರಾಧ ಕೃತ್ಯದಲ್ಲಿ ವಾಹನವು ತಮ್ಮ ಗಮನಕ್ಕೆ ಬಾರದೇ ಈ ಕೃತ್ಯದಲ್ಲಿ ಭಾಗಿಯಾಗಿದೆ ಎಂದು ಸಾಭೀತು ಪಡಿಸಿದ್ದಾರೆಯೇ ?
4. ಈ ಅಪರಾಧ ಪ್ರಕರಣದ ಬಗ್ಗೆ ಕೈಗೊಂಡ ತೀರ್ಮಾನ ಏನು ?

ಈ ಮೇಲಿನ ಅಂಶಗಳಿಂದ ಕಂಡು ಬರುವ ಪರಿಶೀಲನಾಂಶಗಳು

1. ಸಕರಾತ್ಮಕ
2. ನಕರಾತ್ಮಕ
3. ಆದೇಶ, ಏನು ಎಂಬುದಾಗಿರುತ್ತದೆ.?

ಫಿರ್ಯಾದಿದಾರರು ಸಲ್ಲಿಸಿದ ದಾಖಲಾತಿಗಳು ನಡೆಸಿದ ವಿಚಾರಣೆಗಳು, ಸಾಕ್ಷಿಗಳ ಹೇಳಿಕೆಗಳನ್ನು ಪರಿಶೀಲಿಸಿದಾಗ ವಾಹನ ಸಂಖ್ಯೆ:ಸಿಟಿಎ–7859ನ ವಾಹನವು ಈ ಅಪರಾಧ ಕೃತ್ಯದಲ್ಲಿ ಭಾಗಿಯಾಗಿರುವುದು ಧೃಢಪಟ್ಟಿರುತ್ತದೆ.

ವಾಹನದ ಮಾಲೀಕರು ಮರಣಹೊಂದಿರುವುದರಿಂದ ಅವರ ಪರವಾಗಿ ಯಾರೂ ಸಹ ನ್ಯಾಯಾಲಯದ ಮುಂದೆ ಹಾಜರಾಗಿರುವುದಿಲ್ಲ.

ಈ ಎಲ್ಲಾ ಪರಿಶೀಲನಾಂಶಗಳನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶ ನೀಡಿರುತ್ತೇನೆ.

**"ಆದೇಶ"**

ಕೆ.ಹೆಚ್. ವಿನಯ್‌ಕುಮಾರ್ ಭಾ.ಅ.ಸೇ., ಅಧಿಕಾರಿಯುತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಮಂಡ್ಯ ವಿಭಾಗ, ಮಂಡ್ಯ ಆದ ನಾನು ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 71ಎ ಮೇರೆಗೆ ದತ್ತವಾದ ಅಧಿಕಾರದಂತೆ ಈ ಅರಣ್ಯ ಅಪರಾಧ ಕೃತ್ಯದಲ್ಲಿ ಭಾಗಿಯಾಗಿರುವ 407 ವಾಹನ ಸಂಖ್ಯೆ:ಸಿಟಿಎ–7859ರ ವಾಹನ ಈ ಅರಣ್ಯ ಅಪರಾಧ ಪ್ರಕರಣದಲ್ಲಿ ಭಾಗಿಯಾಗಿರುವುದು ದಾಖಲಾತಿಗಳಿಂದ, ಸಾಕ್ಷಿದಾರರ ಹೇಳಿಕೆಯಿಂದ ಹಾಗೂ ಗುರುತಿಸಲಾದ ನಿಶಾನೆಗಳಿಂದ ದೃಢಪಟ್ಟಿರುವುದರಿಂದ ಸದರಿ ವಾಹನ 407 ಸರಕು ಸಾಗಾಣಿಕೆ ವಾಹನ ಹಾಗೂ 533 ಕೆ.ಜಿ ಶ್ರೀಗಂಧದ ತುಂಡುಗಳು ಮತ್ತು ವಿವಿಧ ಕಂಪನಿಗೆ ಸೇರಿದ ತಂಪು ಪಾನೀಯಗಳ 672 ಖಾಲಿ ಬಾಟಲಿಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ. ಇಂದಿನಿಂದ 30 ದಿನಗಳ ಕಾಲ ಸದರಿ ಆದೇಶದ ವಿರುದ್ಧ ಮೇಲ್ಮನವಿ ಸಲ್ಲಿಸಲು ಕಾಲಾವಕಾಶವಿದ್ದು, ನಂತರದಲ್ಲಿ ಈ ಆದೇಶವು ಜಾರಿಗೆ ಬರುತ್ತದೆ.

ಈ ಆದೇಶವನ್ನು ಇಂದು ದಿನಾಂಕ:25/06/2010ರಂದು ತೆರೆದ ನ್ಯಾಯಾಲಯದಲ್ಲಿ ನನ್ನ ಸಹಿಯೊಂದಿಗೆ ಉದ್ಘೋಷಿಸಿರುತ್ತೇನೆ.

ಅಧಿಕಾರಿಯುತ ಅಧಿಕಾರಿ ಹಾಗೂ,
ಉಪ ಅರಣ್ಯ ಸಂರಕ್ಷಣಾಧಿಕಾರಿ,
ಮಂಡ್ಯ ವಿಭಾಗ, ಮಂಡ್ಯ.

ಪಿ.ಆರ್.1114

**ಅಧಿಕಾರಿಯುತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳವರ ನ್ಯಾಯಾಲಯ**
**ಮಂಡ್ಯ ವಿಭಾಗ, ಮಂಡ್ಯ**
**ಅರಣ್ಯ ಮೊಕದ್ದಮೆ ಸಂಖ್ಯೆ:11/09–10, ದಿನಾಂಕ:21ನೇ ಮೇ, 2010**

**ಉಪಸ್ಥಿತಿ:** ಕೆ.ಹೆಚ್.ವಿನಯ್‌ಕುಮಾರ್, ಭಾ.ಅ.ಸೇ,. ಅಧಿಕಾರಿಯುತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಮಂಡ್ಯ ವಿಭಾಗ, ಮಂಡ್ಯ.

| **ಫಿರ್ಯಾಧಿದಾರರು** | | **ಅರ್ಜಿದಾರರು** |
|---|---|---|
| ಕುಮಾರಿ ಎಂ.ಸಿ.ಗೀತಾ,<br>ವಲಯ ಅರಣ್ಯಾಧಿಕಾರಿ,<br>ಮಳವಳ್ಳಿ ವಲಯ, ಮಳವಳ್ಳಿ<br>**ಫಿರ್ಯಾಧಿದಾರರ ಪರ ವಕೀಲರು**<br>ಶಿವಣ್ಣ,<br>ಸಹಾಯಕ ಸರ್ಕಾರಿ ಅಭಿಯೋಜಕ<br>ನಿರ್ದೇಶಕರು, ಮಂಡ್ಯ. | ವಿರುದ್ಧ | ಎ.ಜೆ.ಅಬ್ರಹಾಂ,<br>ಪಾದ್ರಿಗಳು, ಹೊಸದೊಡ್ಡಿ,<br>ಹಲಗೂರು ಹೋಬಳಿ, ಮಳವಳ್ಳಿ ತಾಲ್ಲೂಕು<br>**ಅರ್ಜಿದಾರರ ಪರ ವಕೀಲರು**<br>ಎನ್.ಮುದ್ದಪ್ಪ, ವಕೀಲರು<br>ಮಂಡ್ಯ. |

**ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 71ಎ ಮೇರೆಗೆ ಅರಣ್ಯ ಅಪರಾಧದಲ್ಲಿ ಭಾಗಿಯಾಗಿರುವ ವಾಹನ ಟ್ರಾಕ್ಟರ್ ಕೆ.ಎ–11/ಟಿ–3722, 3723ನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವ ವಿಚಾರಕ್ಕೆ ಸಂಬಂಧಿಸಿದಂತೆ**

**1) ಪ್ರಸ್ತಾವನೆ:**

ದಿನಾಂಕ:25/05/2009 ರಂದು ಮಳವಳ್ಳಿ ವಲಯ ಬಸವನಬೆಟ್ಟ ಮನ್ನಾಜಂಗಲ್ ತಾಳವಾಡಿ ಗಸ್ತಿನ ಚುಜ್ಜಲು ಹತ್ತಿಕಟ್ಟೆ ಅರಣ್ಯ ಪ್ರದೇಶದಲ್ಲಿ ಅಕ್ರಮವಾಗಿ ಕಗ್ಗಲಿ ಮರಗಳನ್ನು ಕಡಿದು ತುಂಡುಗಳಾಗಿ ಪರಿವರ್ತಿಸಿ ಗೋಣಿಚೀಲದಲ್ಲಿ ತುಂಬಿ ಮಹೇಂದ್ರ ಟ್ರಾಕ್ಟರ್ ವಾಹನದಲ್ಲಿ ನೋಂದಣಿ ಸಂಖ್ಯೆ:ಕೆಎ–11 ಟಿ–3722 ಮತ್ತು ಟ್ರೈಲರ್ ನಂ: ಕೆಎ–11 ಟಿ – 3723 ರಲ್ಲಿ ಸಾಗಿಸುವಾಗ ಮಳವಳ್ಳಿ ವಲಯ ಅರಣ್ಯಾಧಿಕಾರಿ ಹಾಗೂ ಸಿಬ್ಬಂದಿಗಳು ಖಚಿತ ವರ್ತಮಾನದ ಮೇರೆಗೆ ಪತ್ತೆ ಮಾಡಿ ಅರಣ್ಯ

ಅಪರಾಧ ಸಂಖ್ಯೆ 7/09–10 ದಿ:25/05/2009 ರಲ್ಲಿ ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 24,62 ಮತ್ತು 71ಎ ಪ್ರಕಾರ ಪ್ರಕರಣ ನೊಂದಾಯಿಸಿಕೊಂಡು ಸೆಕ್ಷನ್ 71ಎ ಮೇರೆಗೆ ಕ್ರಮಕೈಗೊಳ್ಳಲು ಸ್ವತ್ತು ಸಮೇತ ಹಾಜರ್ಪಡಿಸಿರುತ್ತಾರೆ.

ವಾಹನ ಮಾಲೀಕರಾದ ಎ.ಜೆ.ಅಬ್ರಹಾಂ ಬಿನ್ ಜೋಸೆಫ್, ಹೊಸದೊಡ್ಡಿ ಗ್ರಾಮ ಮಳವಳ್ಳಿ ತಾಲ್ಲೂಕು ಇವರು ವಕೀಲರ ಮೂಲಕ ದಿ:02/07/2009 ರಂದು ಹಾಜರಾಗಿ ಅರ್ಜಿ ಸಲ್ಲಿಸಿ ಅಪರಾಧದಲ್ಲಿ ಸಿಲುಕಿರುವ ಮಹೇಂದ್ರ ಟ್ರಾಕ್ಟರ್ ವಾಹನ ನೋಂದಣಿ ಸಂಖ್ಯೆ:ಕೆಎ–11 ಟಿ–3722 ಮತ್ತು ಟ್ರೈಲರ್ ನಂ: ಕೆಎ–11 ಟಿ – 3723 ವಾಹನವನ್ನು ಮದ್ಯಕಾಲಿನ ವಶಕ್ಕೆ ಬಿಡುಗಡೆ ಮಾಡಿಕೊಡಲು ಕೋರಿರುತ್ತಾರೆ.

ದಿ:15/09/2009 ರಂದು ಅರಣ್ಯ ಅಪರಾಧ ವಾಸ್ತವಾಂಶಗಳ ಬಗ್ಗೆ ಸರ್ಕಾರಿ ಸಹಾಯಕ ಅಭಿಯೋಜಕ ನಿರ್ದೇಶಕರು, ಮಂಡ್ಯರವರಲ್ಲಿ ಅರ್ಜಿದಾರರಿಗೆ ವಾಹನವನ್ನು ಮದ್ಯಕಾಲೀನ ವಶಕ್ಕೆ ಬಿಡುಗಡೆ ಮಾಡುವ ಸಂಬಂಧ ಅಭಿಪ್ರಾಯ ಕೇಳಲಾಗಿ ದಿನಾಂಕ:17/09/2009 ರಂದು ತಮ್ಮ ತಕರಾರನ್ನು ಸಲ್ಲಿಸಿರುತ್ತಾರೆ. ಅರ್ಜಿದಾರರು ಯಾವ ಉದ್ದೇಶಕ್ಕಾಗಿ ಆರೋಪಿಗಳಿಗೆ ವಾಹನವನ್ನು ವಹಿಸಿದ್ದರು ಎನ್ನುವ ಬಗ್ಗೆ ನಿಖರವಾದ ಮಾಹಿತಿ ನೀಡಿರುವುದಿಲ್ಲ. ಅಲ್ಲದೇ ಅರ್ಜಿದಾರರು ಅರಣ್ಯ ಅಪರಾಧದಲ್ಲಿ ಶಾಮೀಲಾಗಿರುವುದು ತಿಳಿದು ಬರುತ್ತದೆ. ವಾಹನವನ್ನು ಮದ್ಯಂತರ ಸ್ವಾಧೀನಕ್ಕೆ ನೀಡಿದಲ್ಲಿ ಆರೋಪಿತರು ಇದೇ ರೀತಿಯ ಅಕ್ರಮಕ್ಕೆ ಉಪಯೋಗಿಸುವ ಸಾದ್ಯತೆ ಇರುವುದರಿಂದ ಅರ್ಜಿದಾರರ ಕೋರಿಕೆಯನ್ನು ಮಾನ್ಯ ಮಾಡಲಾಗದು, ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವ ವಿಚಾರದಲ್ಲಿ ನ್ಯಾಯಾಲಯದಲ್ಲಿ ವಿಚಾರಣೆಯಾಗಬೇಕಾಗಿರುವುದರಿಂದ ಹಾಗೂ ಸಾಕ್ಷಿಗಳು ವಾಹನವನ್ನು ವಿಚಾರಣೆಯ ಸಮಯದಲ್ಲಿ ಗುರ್ತಿಸಬೇಕಾಗಿರುವುದರಿಂದ ಮತ್ತು ಅರ್ಜಿದಾರರು ವಾಹನವನ್ನು ಉಪಯೋಗಿಸಿ ಹಾಳು ಮಾಡುವ ಸಂಭವವಿರುವುದರಿಂದ ಅರ್ಜಿದಾರರ ಸ್ವಾಧೀನಕ್ಕೆ ಕೊಡುವುದು ಸೂಕ್ತವಾದುದಲ್ಲ. ಈ ಪ್ರಕರಣದಲ್ಲಿ ವಿಚಾರಣೆ ನಡೆಸಿ ನ್ಯಾಯಾಲಯದಿಂದ ಅಂತಿಮ ಆದೇಶ ನೀಡುವವರೆವಿಗೂ ಅಧಿಕಾರಿಯುತ ಅಧಿಕಾರಿಯವರ ಸ್ವಾಧೀನದಲ್ಲಿ ಇಟ್ಟುಕೊಳ್ಳುವುದು ಸೂಕ್ತವೆಂದು ತಕರಾರು ಸಲ್ಲಿಸಿರುತ್ತಾರೆ.

ಅಭಿಯೋಜಕರು ಮತ್ತು ಅರ್ಜಿದಾರರ ಪರವಾದ ಲಿಖಿತ ವಾದ ಪ್ರತಿವಾದಗಳನ್ನು ವಿಶ್ಲೇಷಿಸಿದಾಗ ಅರ್ಜಿದಾರರು ಮದ್ಯಕಾಲೀನ ವಶಕ್ಕೆ ವಾಹನ ಬಿಡುಗಡೆ ಕೋರಿ ಷರತ್ತುಗಳಿಗೆ ಬದ್ದರಾಗಿರುತ್ತೇವೆಂದು ತಿಳಿಸಿರುವುದನ್ನು ಒಪ್ಪಬಹುದಾಗಿದ್ದರೂ, ಸಹಾಯಕ ಸರ್ಕಾರಿ ಅಭಿಯೋಜಕರ ಮತ್ತೊಂದು ವಾದ ಪ್ರಕರಣದಲ್ಲಿ ಪ್ರಕರಣವು ತನಿಖಾ ಹಂತದಲ್ಲಿರುವುದರಿಂದ ತನಿಖೆಗೆ ತೊಡಕಾಗುತ್ತದೆ ಎಂಬ ಅಂಶವನ್ನು ಗಮನಿಸಬೇಕಾಗುತ್ತದೆ. ಭಾರತ ದೇಶದ ಸರ್ವೋಚ್ಛ ನ್ಯಾಯಾಲಯವು ದಿನಾಂಕ:17/08/2000ರ ಅಸಲು ದಾವೆ ಸಂಖ್ಯೆ 668/2000ರ ಕರ್ನಾಟಕ ರಾಜ್ಯ ವಿರುದ್ದ ಕೆ.ಕೃಷ್ಣನ್ ಪ್ರಕರಣದಲ್ಲಿ "ಅರಣ್ಯ ಮೊಕದ್ದಮೆ ಪ್ರಕರಣದಲ್ಲಿ ಬಳಸಿದೆ ಎನ್ನಲಾದ, ವಶಪಡಿಸಿಕೊಳ್ಳಲಾದ ಅರಣ್ಯ ಸಂಪತ್ತು, ವಾಹನ, ಸಲಕರಣೆಗಳು, ಎತ್ತು ಮುಂತಾದವುಗಳನ್ನು ಸಾಮಾನ್ಯವಾಗಿ ಮದ್ಯಂತರ ವಶಕ್ಕೆ ಬಿಡುಗಡೆಗೊಳಿಸಬಾರದೆಂದು, ಹಾಗೆಂದ ಮಾತ್ರಕ್ಕೆ ಅಧಿಕಾರಿಗಳು ಅದನ್ನು ಬಿಡುಗಡೆಗೊಳಿಸುವುದನ್ನು ತಡೆಹಿಡಿಯಬೇಕೆಂದೂ ಅಲ್ಲ, ಆದರೆ ಇಂತಹ ಉದಾರ ನೀತಿಯಿಂದಾಗಿ ಇಂತಹ ಅರಣ್ಯ ಮೊಕದ್ದಮೆ ಪ್ರಕರಣಗಳು ಇನ್ನು ಹೆಚ್ಚಾಗಿ ಅರಣ್ಯ ಸಂಪತ್ತಿನ ನಾಶ, ಭೂತಾಯಿ ಹಾಗೂ ಸುತ್ತಲಿನ ಪರಿಸರವನ್ನು ಹಾನಿಗೊಳಿಸುತ್ತದೆ. ಹಾಗೂ ಇಂತಹ ಬಿಡುಗಡೆ, ಅರಣ್ಯ ಅಪರಾಧಗಳನ್ನು ಇನ್ನು ಉತ್ತೇಜನಗೊಳಿಸಿ ಅವರು ಇಂತಹ ಪ್ರಕರಣಗಳಲ್ಲಿ ಮತ್ತೆ ತೊಡಗಿಸುವಂತೆ ಪ್ರೇರಣೆ ನೀಡುವುದರಿಂದ ಬಿಡುಗಡೆಗೊಳಿಸುವುದು ಸೂಕ್ತ ಹಾಗೂ ಸಾಧು ಕ್ರಮವಲ್ಲ ಎಂಬ ಅಭಿಪ್ರಾಯ ನೀಡುತ್ತದೆ." ಆದುದರಿಂದ ಸರ್ವೋಚ್ಚ ನ್ಯಾಯಾಲಯದ ಅಭಿಪ್ರಾಯವನ್ನು ಮೇಲ್ಕಂಡ ಪ್ರಕರಣಕ್ಕೂ ಅನ್ವಯಿಸುತ್ತಾ ಸದರಿ ವಾಹನವನ್ನು ಬಿಡುಗಡೆಗೊಳಿಸಿದ್ದಲ್ಲಿ ಸದರಿ ಆರೋಪಿಯು ಉತ್ತೇಜಿತನಾಗಿ ಮತ್ತೋಮ್ಮೆ ವಾಹನವನ್ನು ಇಂತಹ ಅರಣ್ಯ ಸಂಪತ್ತಿನ ಕಳ್ಳಸಾಗಾಣಿಕೆಯಲ್ಲಿ ತೊಡಗಿಸುವ ಸಾಧ್ಯತೆಯನ್ನು ಅಲ್ಲಗೆಳೆಯಲಾಗದಿರುವುದರಿಂದ ಹಾಗೂ ವಾಹನವನ್ನು ಬಿಡುಗಡೆಗೊಳಿಸದೇ ಇದ್ದಲ್ಲಿ ಸದರಿ ಪ್ರಕರಣದ ಆರೋಪಿ ಹಾಗೂ ಇತರ ಅಪರಾಧಿಗಳು ಅರಣ್ಯ ಸಂಪತ್ತಿನ ಕಳ್ಳಸಾಗಾಣಿಕೆಯಲ್ಲಿ ಮತ್ತೊಮ್ಮೆ ತೊಡಗದಂತೆ ಉತ್ತೇಜನಗೊಳಿಸಲು ಸಹಕಾರಿಯಾಗುವ ಹಿನ್ನಲೆಯಲ್ಲಿ ಅರ್ಜಿದಾರರ ಕೋರಿಕೆಯಂತೆ ವಾಹನವನ್ನು ಮಧ್ಯಕಾಲೀನ ವಶಕ್ಕೆ ಬಿಡುಗಡೆ ಮಾಡಲು ದಿನಾಂಕ:25/09/09ರಂದು ತಿರಸ್ಕರಿಸಲಾಯಿತು.

**2. ವಿಚಾರಣೆ**

ನ್ಯಾಯಾಲಯದ ಕಲಾಪಗಳಲ್ಲಿ ದಿನಾಂಕ:14/08/2009ರಿಂದ ಇದುವರೆವಿಗೂ ವಿವಿಧ ಹಂತಗಳಲ್ಲಿ ವಿಚಾರಣಾಕ್ರಮ ನಡೆಸಲಾಗಿದೆ. ಅರ್ಜಿದಾರರು ಹಾಗೂ ಅರ್ಜಿದಾರರ ಪರವಾದ ವಕೀಲರ ಗೈರು ಹಾಜರಿಯಲ್ಲಿ ಪ್ರಾಸಿಕ್ಯೂಷನ್ ಪರ ಸಾಕ್ಷಿ ವಿಚಾರಣೆಯನ್ನು ಸಹಾಯಕ ಅಭಿಯೋಜಕ ನಿರ್ದೇಶಕರು ನಡೆಸಿದರು. ಪ್ರಾಸಿಕ್ಯೂಷನ್ ಪರ ಪಿಡಬ್ಲ್ಯು–1 ರಲ್ಲಿ ಡಿ.ದೇವರಾಜು

ಸಾಕ್ಷಿ ನುಡಿಯುತ್ತಾ, ನಾನು ಸುಮಾರು ಒಂದು ವರ್ಷ ಎರಡು ತಿಂಗಳಿಂದ ಮಳವಳ್ಳಿ ವಲಯ ಅರಣ್ಯಾಧಿಕಾರಿಯವರ ಕಛೇರಿಯಲ್ಲಿ ವನಪಾಲಕನಾಗಿ ಕೆಲಸ ನಿರ್ವಹಿಸುತ್ತಿರುತ್ತೇನೆ. ನಾನು ಹಲಗೂರು ಶಾಖೆಯ ವನಪಾಲಕನಾಗಿ ಈಗ ಕೆಲಸ ನಿರ್ವಹಿಸುತ್ತಿರುತ್ತೇನೆ. ದಿನಾಂಕ:25/05/09ರಂದು ನಮ್ಮ ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿರವರಿಗೆ ತಿಳಿದುಬಂದಿದ್ದ ಖಚಿತ ವರ್ತಮಾನದ ಮೇರೆಗೆ ಬಸವನಬೆಟ್ಟ ಮೀಸಲ ಅರಣ್ಯ ಪ್ರದೇಶದ ತಾಳವಾಡಿ ಗಸ್ತಿನ ಚುಜ್ಜಲಿ ಅರೆಕಟ್ಟೆ ಅರಣ್ಯ ಪ್ರದೇಶದಲ್ಲಿ ಯಾರೋ ಮರಗಳನ್ನು ಕಡಿದು ಸಾಗಿಸಲಿದ್ದಾರೆ ಎಂದು ತಿಳಿದುಬಂದ ಮೇರೆಗೆ ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿಗಳು ನನ್ನನ್ನು ಹಾಗೂ ಸಿಬ್ಬಂದಿಯವರಾದ ಅರಣ್ಯರಕ್ಷಕ ಅದರ್ಶಗೌಡ ಮತ್ತು ಅರಣ್ಯ ರಕ್ಷಕ ಶಿವರಾಜುರವರನ್ನು ಮತ್ತು ದೂರು ಸಲ್ಲಿಸಿದ್ದ ಕೃಷ್ಣೇಅರಸ್‌ರವರನ್ನು ನಮ್ಮ ಇಲಾಖಾ ಜೀಪಿನಲ್ಲಿ ಕರೆದುಕೊಂಡು ತಾಳವಾಡಿ ಗಸ್ತಿನ ನೆಲಸೋಣೆ ಹಗ್ಗು ಪ್ರದೇಶದಲ್ಲಿ ಗಸ್ತು ಮಾಡುತ್ತಿದ್ದಾಗ ಟ್ರಾಕ್ಟರ್ ವಾಹನದ ಶಬ್ದ ಕೇಳಿಬಂದು ಆ ಶಬ್ದ ಕೇಳಿಬಂದ ಸುಮಾರು ಅರ್ಧ ಕಿಮೀ ದೂರ ಹೋಗಿ ನೋಡಲಾಗಿ ಸದರಿ ವಾಹನವು ಚುಜ್ಜಲಿ ಅರೆಕಟ್ಟೆ ಅರಣ್ಯ ಪ್ರದೇಶದಲ್ಲಿ ಇದ್ದುದು ತಿಳಿದುಬಂದಿತು. ಟ್ರಾಕ್ಟರನ್ನು ಪರಿಶೀಲಿಸಲಾಗಿ ಅದರ ಸಂಖ್ಯೆ:ಕೆ.ಎ–11–ಟಿ–3722 ಹಾಗೂ ಟ್ರೈಲರ್ ಸಂಖ್ಯೆ:ಕೆ.ಎ.11–ಟಿ–3723 ಆಗಿದ್ದು ಟ್ರಾಕ್ಟರ್‌ನ್ನು ಪರಿಶೀಲಿಸಲಾಗಿ ಅದರಲ್ಲಿ ಕಗ್ಗಲಿ ಮರಗಳ ಚೇಗಿನ ಭಾಗವನ್ನು ಕತ್ತರಿಸಿ ಚೀಲದಲ್ಲಿ ತುಂಬಿರುವುದು ತಿಳಿದುಬಂದಿತು. ಸ್ಥಳದಲ್ಲಿ 5 ಜನರಿದ್ದು ಅವರುಗಳನ್ನು ದಸ್ತಗಿರಿ ಮಾಡಿ ಅವರನ್ನು ವಿಚಾರಿಸಲಾಗಿ ಅವರಲ್ಲಿ ಒಂದನೇ ಅರೋಪಿಯ ಹೆಸರು ವೆಂಕಟನಾಯ್ಕ ಬಿನ್ ದಾಸಾನಾಯ್ಕ ವಾಹನದ ಚಾಲಕ ಹೊಸದೊಡ್ಡಿ ಗ್ರಾಮ ಹಾಗೂ ಎರಡನೇ ಆರೋಪಿಯ ಹೆಸರು ನಾಗನಾಯ್ಕ ಬಿನ್ ಮಾದಿನಾಯ್ಕ ಹೊಸದೊಡ್ಡಿ ಗ್ರಾಮ ಮೂರನೇ ಆರೋಪಿಯ ಹೆಸರು ಲಕ್ಷ್ಮಿನಾಯ್ಕ ಬಿನ್ ಸೇವಿನಾಯ್ಕ ಹೊಸದೊಡ್ಡಿ ಗ್ರಾಮ ನಾಲ್ಕನೇ ಆರೋಪಿಯ ಹೆಸರು ಮಾಯಣ್ಣ ಬಿನ್ ರಾಮೇಗೌಡ ಮಾಸ್ತರದೊಡ್ಡಿಗ್ರಾಮ ಐದನೇ ಆರೋಪಿಯ ಹೆಸರು ಚಿಕ್ಕಮಾದಯ್ಯ ಬಿನ್ ಪುಟ್ಟಮಾದಯ್ಯ ಸೋಲಿಗರ ದೊಡ್ಡಿ ಗ್ರಾಮದವರೆಂದು ತಿಳಿದುಬಂದಿತು. ಸದರಿ ಆರೋಪಿಗಳನ್ನು ಅರಣ್ಯ ಪ್ರದೇಶದಲ್ಲಿ ಮರಗಳನ್ನು ಕಡಿದು ಕಾರಣವೇನು ಎಂದು ಕೇಳಿದಾಗ ಕೊಳ್ಳೇಗಾಲದ ಬಾಬು ಎಂಬುವವರು ಕಗ್ಗಲಿ ಮರದ ಚೇಗಿನ ಭಾಗವನ್ನು ಸಂಗ್ರಹಿಸುವಂತೆ ನಮಗೆ ಹೇಳಿದ್ದರೂ ಎಂದು ತಿಳಿಸಿರುತ್ತಾರೆ. ನಂತರ ಆರೋಪಿಗಳನ್ನು ದಸ್ತಗಿರಿ ಮಾಡಿ ಸ್ಥಳದಲ್ಲಿ ದೊರೆತ ಟ್ರಾಕ್ಟರ್‌ನ್ನು ಹಾಗೂ 27 ಗೋಣಿ ಚೀಲಗಳಲ್ಲಿ ತುಂಬಿದ್ದ ಕಗ್ಗಲಿ ಮರದ ಚೇಗು ಭಾಗದ ತುಂಡುಗಳನ್ನು ನಮ್ಮ ಮೇಲಾಧಿಕಾರಿಗಳ ಆದೇಶದಂತೆ ಮಹಜರ್ ಬರೆದು ಅಮಾನತ್ತುಪಡಿಸಿಕೊಳ್ಳಲಾಯಿತು. ಸದರಿ ಮಹಜರನ್ನು ನಾನೇ ಬರೆದಿರುತ್ತೇನೆ. ಮಹಜರ್‌ಗೆ ನಾನು ಮತ್ತು ನಮ್ಮ ಇಲಾಖಾ ಸಿಬ್ಬಂದಿಯವರು ಹಾಗೂ ನಮ್ಮ ಜೊತೆಯಲ್ಲಿದ್ದ ಕೃಷ್ಣೇ ಅರಸ್ ಮತ್ತು ನಮ್ಮ ಮೇಲಾಧಿಕಾರಿಯವರು ಸಹ ಸಹಿ ಹಾಕಿರುತ್ತಾರೆ. ಮಹಜರನ್ನು ನೋಡಿದರೆ ಗುರುತಿಸುತ್ತೇನೆ. ಸದರಿ ಮಹಜರ್‌ನ್ನು ನಿಶಾನೆ ಪಿ1 ಎಂದು ಸಾಕ್ಷಿ ಸಹಿಯನ್ನು ನಿಶಾನೆ ಪಿ1ಎ ಎಂದು ಗುರುತಿಸಲಾಯಿತು. ನಂತರ ಟ್ರಾಕ್ಟರ್ ಹಾಗೂ ಕಗ್ಗಲಿ ಮರದ ಚೇಗುಗಳನ್ನು ತುಂಬಿದ್ದ ಗೋಣಿ ಚೀಲಗಳನ್ನು ಆರೋಪಿಗಳ ಸಮೇತ ನಮ್ಮ ವಲಯ ಕಛೇರಿಗೆ ತೆಗೆದುಕೊಂಡು ಹೋಗಿರುತ್ತೇವೆ. ನಂತರ ಅದೇ ದಿನದಂದು ಮೊಕದ್ದಮೆಯನ್ನು ನೊಂದಾಯಿಸಿ ಪ್ರಥಮ ವರ್ತಮಾನದ ವರದಿಯನ್ನು ಹಾಗೂ ಮಾಲು ಜಪ್ತಿ ವರದಿಯನ್ನು ನ್ಯಾಯಾಲಯಕ್ಕೆ ಸಲ್ಲಿಸಿರುತ್ತೇನೆ. ಪ್ರಥಮ ವರ್ತಮಾನದ ವರದಿಯನ್ನು ನಿಶಾನೆ ಪಿ2 ಎಂದು ಸಾಕ್ಷಿ ಸಹಿಯನ್ನು ನಿಶಾನೆ ಪಿ2ಎ ಎಂದು ಹಾಗೂ ಮಾಲು ಜಪ್ತಿ ವರದಿಯನ್ನು ನಿಶಾನೆ ಪಿ3 ಎಂದು ಹಾಗೂ ಸಾಕ್ಷಿ ಸಹಿಯನ್ನು ನಿಶಾನೆ ಪಿ3ಎ ಎಂದು ಗುರುತಿಸಲಾಯಿತು. ನಂತರ ಪ್ರಥಮ ವರ್ತಮಾನದ ವರದಿ ಹಾಗೂ ಮಾಲು ಜಪ್ತಿ ವರದಿಯ ನಕಲುಗಳನ್ನು ಮಾಲು ಸಮೇತ ವಾಹನದೊಂದಿಗೆ ಉಪ ಅರಣ್ಯ ಸಂರಕ್ಷಣಾಧಿಕಾರಿಗಳವರ ಕಛೇರಿಗೆ ಹಾಜರ್‌ಪಡಿಸಿರುತ್ತೇನೆ.

ಅರ್ಜಿದಾರರಾಗಲಿ ಅವರ ಪರವಾದ ವಕೀಲರಾಗಲೀ ಹಾಜರಾಗದೇ ಇರುವುದರಿಂದ ಪಾಟೀ ಸವಾಲು ಏನೂ ಇರುವುದಿಲ್ಲವೆಂದು ತೆಗೆದುಕೊಳ್ಳಲಾಯಿತು.

ಪಿಡಬ್ಲ್ಯು–2ರಲ್ಲಿ ಕೃಷ್ಣೇ ಅರಸ್ ಸಾಕ್ಷಿ ನುಡಿಯುತ್ತಾ, ನನಗೆ ಹಲಗೂರು ಶಾಖೆಯ ವನಪಾಲಕರಾದ ಡಿ.ದೇವರಾಜು ಹಾಗೂ ಅರಣ್ಯ ರಕ್ಷಕರಾದ ಆದರ್ಶಗೌಡ ಮತ್ತು ಶಿವರಾಜುರವರು ಗೊತ್ತಿರುತ್ತಾರೆ. ಬಸವನಬೆಟ್ಟ ಮೀಸಲು ಅರಣ್ಯಪ್ರದೇಶದಿಂದ ಸುಮಾರು 4 ಕಿಮೀ ದೂರದಲ್ಲಿ ನಮ್ಮ ಗ್ರಾಮವಿರುತ್ತದೆ. ಬಸವನಬೆಟ್ಟ ಹಾಗೂ ತಾಳವಾಡಿ ಅರಣ್ಯ ಪ್ರದೇಶದಲ್ಲಿರುವ ಮರಗಳು ಕಡಿದು ಲೂಟಿಯಾಗುತ್ತಿರುವ ಬಗ್ಗೆ ಸರ್ಕಾರಕ್ಕೆ ಹಾಗೂ ಅರಣ್ಯ ಇಲಾಖೆ ಅಧಿಕಾರಿಗಳಿಗೆ ನಾನು ದೂರನ್ನು ಸಲ್ಲಿಸಿರುತ್ತೇನೆ. ದಿನಾಂಕ:25/05/09ರಂದು ಬಸವನಬೆಟ್ಟ ಮೀಸಲು ಅರಣ್ಯದ ತಾಳವಾಡಿ ಗಸ್ತಿನ ಚುಜ್ಜಲಿ ಅರೇಕಟ್ಟೆ ಅರಣ್ಯಪ್ರದೇಶದಲ್ಲಿ ಮರಗಳನ್ನು ಕಡಿಯುತ್ತಿದ್ದಾರೆ ಎಂಬ ವಿಚಾರಕ್ಕೆ ಸಂಬಂಧಪಟ್ಟಂತೆ ಮಂಡ್ಯ ಉಪವಿಭಾಗದ ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿಗಳವರ ಮತ್ತು ಅವರ ಸಿಬ್ಬಂದಿಯವರಾದ ವನಪಾಲಕ ಡಿ.ದೇವರಾಜು, ಅರಣ್ಯ ರಕ್ಷಕ ಆದರ್ಶಗೌಡ

ಮತ್ತು ಶಿವರಾಜು ರವರ ಜೊತೆಯಲ್ಲಿ ಅರಣ್ಯ ಪ್ರದೇಶದಲ್ಲಿ ನಾನೂ ಸಹ ಹೋಗಿದ್ದೆನು. ಅರಣ್ಯ ಪ್ರದೇಶದಲ್ಲಿ ಗಸ್ತು ಮಾಡಿ ಪರಿಶೀಲಿಸುತ್ತಿದ್ದಾಗ ತಾಳವಾಡಿ ಗಸ್ತಿನ ಚುಜ್ಜಲಿ ಅರೆಕಟ್ಟೆ ಅರಣ್ಯ ಪ್ರದೇಶದ ಕಡೆ ಯಾವುದೋ ವಾಹನದ ಶಬ್ದ ಕೇಳಿಬಂದಾಗ ನಾವುಗಳು ಸದರಿ ಪ್ರದೇಶದ ಹತ್ತಿರ ಹೋಗಿ ನೋಡಲಾಗಿ ಟ್ರಾಕ್ಟರ್‌ಗೆ ಗೋಣಿಚೀಲಗಳಲ್ಲಿ ಏನೋ ತುಂಬಿ ಸಾಗಾಣಿಕೆ ಮಾಡುತ್ತಿರುವುದು ಕಂಡುಬಂದಾಗ ಟ್ರಾಕ್ಟರನ್ನು ತಡೆದು ನಿಲ್ಲಿಸಿ ಸ್ಥಳದಲ್ಲಿದ್ದ ಐದು ಜನ ಆಸಾಮಿಗಳನ್ನು ವಿಚಾರಣೆ ಮಾಡಲಾಗಿ ಸದರಿ ಚೀಲಗಳಲ್ಲಿ ಕಗ್ಗಲಿ ಒಣ ಮರಗಳನ್ನು ಕಡಿದು ಅದರ ಚೇಗಿನ ಭಾಗವನ್ನು ಸಂಗ್ರಹಿಸಿ ಮೂಟೆಗಳಲ್ಲಿ ತುಂಬಿ ಸಾಗಿಸುತ್ತಿದ್ದುದು ಕಂಡುಬಂದಿತು. ಟ್ರಾಕ್ಟರ್ ನಂಬರ್ ಪರಿಶೀಲಿಸಲಾಗಿ ಅದು ಕೆ.ಎ.11–ಟಿ–3722 ಮತ್ತು ಟ್ರಾಲಿ ಸಂಖ್ಯೆ:ಕೆ.ಎ.11–ಟಿ–3723 ಆಗಿದ್ದು ಸ್ಥಳದಲ್ಲಿದ್ದ ವ್ಯಕ್ತಿಗಳನ್ನು ವಿಚಾರಿಸಿದಾಗ ಒಂದನೇ ಅರೋಪಿಯ ಹೆಸರು ವೆಂಕಟನಾಯ್ಕ ಬಿನ್ ದಾಸಾನಾಯ್ಕ ವಾಹನದ ಚಾಲಕ ಹೊಸದೊಡ್ಡಿ ಗ್ರಾಮ ಹಾಗೂ ಎರಡನೇ ಆರೋಪಿಯ ಹೆಸರು ನಾಗನಾಯ್ಕ ಬಿನ್ ಮಾದಿನಾಯ್ಕ ಹೊಸದೊಡ್ಡಿ ಗ್ರಾಮ ಮೂರನೇ ಆರೋಪಿಯ ಹೆಸರು ಲಕ್ಷ್ಮಿನಾಯ್ಕ ಬಿನ್ ಸೇವಿನಾಯ್ಕ ಹೊಸದೊಡ್ಡಿ ಗ್ರಾಮ ನಾಲ್ಕನೇ ಆರೋಪಿಯ ಹೆಸರು ಮಾಯಣ್ಣ ಬಿನ್ ರಾಮೇಗೌಡ ಮಾಸ್ತರದೊಡ್ಡಿಗ್ರಾಮ ಐದನೇ ಆರೋಪಿಯ ಹೆಸರು ಚಿಕ್ಕಮಾದಯ್ಯ ಬಿನ್ ಪುಟ್ಟಮಾದಯ್ಯ ಸೋಲಿಗರ ದೊಡ್ಡಿ ಗ್ರಾಮದವರೆಂದು ತಿಳಿದುಬಂದಿತು. ಸದರಿ ಆರೋಪಿಗಳನ್ನು ಅರಣ್ಯ ಪ್ರದೇಶದಲ್ಲಿ ಮರಗಳನ್ನು ಕಡಿದು ಕಾರಣವೇನು ಎಂದು ಕೇಳಿದಾಗ ಕೊಳ್ಳೇಗಾಲದ ಬಾಬು ಎಂಬುವವರು ಕಗ್ಗಲಿ ಮರದ ಚೇಗಿನ ಭಾಗವನ್ನು ಸಂಗ್ರಹಿಸುವಂತೆ ನಮಗೆ ಹೇಳಿದ್ದರು ಎಂದು ತಿಳಿಸಿರುತ್ತಾರೆ. ನಂತರ ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿಗಳವರ ಆದೇಶದ ಮೇರೆಗೆ ವನಪಾಲಕರಾದ ಡಿ.ದೇವರಾಜುರವರು ಸ್ಥಳದಲ್ಲಿ ಮಹಜರ್ ಬರೆದಿರುತ್ತಾರೆ ಆ ಮಹಜರ್ ನಾನು ಸಹಿ ಮಾಡಿರುತ್ತೇನೆ. ಮಹಜರನ್ನು ಈಗಾಗಲೇ ನಿಶಾನೆ ಪಿ1 ಎಂದು ಗುರುತಿಸಲಾಗಿದ್ದು ಸಾಕ್ಷಿ ಸಹಿಯನ್ನು ನಿಶಾನೆ 1ಬಿ ಎಂದು ಗುರುತಿಸಲಾಯಿತು. ಸ್ಥಳದಲ್ಲಿದ್ದ ಆರೋಪಿಗಳನ್ನು ವಿಚಾರಿಸಲಾಗಿ ಅರಣ್ಯ ಪ್ರದೇಶದಲ್ಲಿ ಕಗ್ಗಲಿ ಮರಗಳನ್ನು ಕಡಿಯಲು ಯಾವುದೇ ಪರವಾನಗೆ ಪಡೆಯದೇ ಇರುವುದು ತಿಳಿದುಬಂದಿರುತ್ತದೆ. ನಂತರ ಸ್ಥಳದಲ್ಲಿ ದೊರೆತ ಟ್ರಾಕ್ಟರ್ ಮತ್ತು ಕಗ್ಗಲಿ ಮರದ ತುಂಡುಗಳನ್ನು ತುಂಬಿದ್ದ ಚೀಲಗಳನ್ನು ಆರೋಪಿಗಳ ಸಮೇತ ಅರಣ್ಯ ಇಲಾಖೆಯ ಕಛೇರಿಗೆ ತೆಗೆದುಕೊಂಡು ಹೋಗಿರುತ್ತಾರೆ.

**5. ಪರಿಶೀಲನೆ:**

ಫಿರ್ಯಾದಿದಾರರು ಸಲ್ಲಿಸಲಾದ ದಾಖಲಾತಿಗಳು, ಪ್ರಾಸಿಕ್ಯೂಷನ್ ಪರ ಪಿಡಬ್ಲ್ಯು–1 ಮತ್ತು ಪಿಡಬ್ಲ್ಯು–2ರ ಸಾಕ್ಷಿ ಹೇಳಿಕೆಯನ್ನು ಪರಿಶೀಲಿಸಿದೆ. ದಿನಾಂಕ:25/05/09ರಂದು ಮಳವಳ್ಳಿ ವಲಯ ಬಸವನಬೆಟ್ಟ ಮೀಸಲು ಅರಣ್ಯ ಪ್ರದೇಶದ ತಾಳವಾಡಿ ಗಸ್ತಿನ ಚುಜ್ಜಲಿಕಟ್ಟೆ ಅರಣ್ಯ ಪ್ರದೇಶದಲ್ಲಿ ಕಗ್ಗಲಿ ಮರಗಳ ಚೇಗಿನ ಭಾಗವನ್ನು ಕತ್ತರಿಸಿ ಟ್ರಾಕ್ಟರ್ ಕೆ.ಎ–11/ಟಿ–3722, 3723ರಲ್ಲಿ ಅಕ್ರಮವಾಗಿ ಸಾಗಿಸುತ್ತಿರುವುದರ ಬಗ್ಗೆ ಸಾಕ್ಷಿ ನುಡಿಯುತ್ತಾ 27 ಗೋಣಿ ಚೀಲಗಳಲ್ಲಿ ತುಂಬಿದ್ದ ಕಗ್ಗಲಿ ಮರದ ಚೇಗಿನ ತುಂಡುಗಳನ್ನು ಗುರುತಿಸಿದ್ದು, ದಾಖಲಾತಿಗಳನ್ನು ನಿಶಾನೆ ಪಿ–1 ರಿಂದ ನಿಶಾನೆ ಪಿ–3ರಲ್ಲಿ ಗುರುತಿಸಿ ಅರಣ್ಯ ಅಪರಾಧ ಪ್ರಕರಣದಲ್ಲಿ ಟ್ರಾಕ್ಟರ್ ವಾಹನವು ಭಾಗಿಯಾಗಿರುವುದರ ಬಗ್ಗೆ ಧೃಢಪಡಿಸಿರುತ್ತಾರೆ.

ಅರ್ಜಿದಾರರು ತಮ್ಮ ವಕೀಲರ ಮೂಲಕ ವಾಹನವನ್ನು ಮದ್ಯಕಾಲೀನ ವಶಕ್ಕೆ ಬಿಡುಗಡೆ ಕೋರಿ ಅರ್ಜಿ ಸಲ್ಲಿಸಿದ್ದು, ನಂತರದ ಕಲಾಪಗಳಲ್ಲಿ ಭಾಗಿಯಾಗದೇ ತಟಸ್ಥವಾಗಿರುವುದು ಅರಣ್ಯ ಅಪರಾಧ ಪ್ರಕರಣದಲ್ಲಿ ವಾಹನವು ಭಾಗಿಯಾಗಿರುವುದಕ್ಕೆ ಪುಷ್ಠೀಕರಿಸುತ್ತದೆ.

ಸಾಕ್ಷಿದಾರರ ಹೇಳಿಕೆ, ಫಿರ್ಯಾಧಿದಾರರ ದಾಖಲಾತಿಗಳು, ಅರ್ಜಿದಾರರ ನಿರಾಸಕ್ತಿಗಳನ್ನು ತುಲನಾತ್ಮಕವಾಗಿ ಪರಿಶೀಲಿಸಿರುತ್ತೇನೆ ಇದರಿಂದ ಕಂಡುಬರುವ ಅಂಶಗಳೆಂದರೇ,

1) ಫಿರ್ಯಾಧಿದಾರರು ಅರಣ್ಯ ಅಪರಾಧ ಪ್ರಕರಣದಲ್ಲಿ ಟ್ರಾಕ್ಟರ್ ಕೆ.ಎ–11/ಟಿ–3722, 3723 ಭಾಗಿಯಾಗಿರುವುದರ ಬಗ್ಗೆ ಸಾಬೀತು ಪಡಿಸಿದ್ದಾರೆಯೇ?
2) ಅರ್ಜಿದಾರರು ವಾಹನ ಟ್ರಾಕ್ಟರ್ ಕೆ.ಎ–11/ಟಿ–3722, 3723 ತಮ್ಮ ಅರಿವಿಗೆ ಬಾರದೇ ಅಪರಾಧ ಪ್ರಕರಣದಲ್ಲಿ ಭಾಗಿಯಾಗಿದೆ ಎಂಬುದನ್ನು ಸಾಭೀತುಪಡಿಸಿದ್ದಾರೆಯೇ ?
3) ಈ ಅಪರಾಧ ಪ್ರಕರಣದ ಬಗ್ಗೆ ಕೈಗೊಂಡ ತೀರ್ಮಾನ ಏನು ?

ಎಲ್ಲಾ ಗುಣಾತ್ಮಕ ಸಾಕ್ಷಿ ಹೇಳಿಕೆ ಹಾಗೂ ದಾಖಲಾತಿಗಳ ಪರಿಶೀಲನೆಯಿಂದ ಮೇಲ್ಕಂಡ ಅಂಶಗಳಿಗೆ ಈ ಕೆಳಕಂಡಂತೆ ನಿರ್ಣಯಿಸಿರುತ್ತೇನೆ.

1. ಸಕರಾತ್ಮಕ
2. ನಕರಾತ್ಮಕ
3. ಆದೇಶ, ಏನು?

ಮೇಲ್ಕಂಡ ಎಲ್ಲಾ ಅಂಶಗಳ ಪರಿಶೀಲನಾತ್ಮಕ ನಿರ್ಣಯದಂತೆ ಅರಣ್ಯ ಅಪರಾಧ ಪ್ರಕರಣದ ಸಮನ್ವಯಕ್ಕೆ ಸಂಬಂಧಿಸಿದಂತೆ ಗೌರವಾನ್ವಿತ ಸರ್ವೋಚ್ಚ ನ್ಯಾಯಾಲಯದ ಐಎಲ್‌ಆರ್ 1985/KRNT/2571ರ ರಮೇಶ್.ಎನ್.ಧೀಕ್ಷಿತ್ ವಿರುದ್ಧ ಕರ್ನಾಟಕ ರಾಜ್ಯ ಸರ್ಕಾರದ ಪ್ರಕರಣದಲ್ಲಿ "ಮಾಲೀಕರುಗಳು ತಾವು ಅಥವಾ ತಮ್ಮ ಏಜೆಂಟರುಗಳು ಮತ್ತು ವಾಹನದ ಮೇಲ್ವಿಚಾರಣೆ ನೋಡಿಕೊಳ್ಳುವ ಎಲ್ಲಾ ವ್ಯಕ್ತಿಗಳು ಅಪರಾಧದಲ್ಲಿ ಭಾಗಿಗಳಾಗಿಲ್ಲ ಎಂದು ರುಜುವಾತುಪಡಿಸುವ ಜವಾಬ್ದಾರಿ ಅವರ ಮೇಲಿರುತ್ತದೆ. ಮತ್ತು ಮಾಲೀಕರು ತೆಗೆದುಕೊಂಡ ಎಲ್ಲಾ ಮುನ್ನೆಚ್ಚರಿಕೆಗಳನ್ನು ಖಾತರಿಪಡಿಸಿ, ನ್ಯಾಯಾಲಯಕ್ಕೆ ತಿಳಿದುಹೇಳಬೇಕಾಗುತ್ತದೆ" ಎಂದಿರುತ್ತದೆ.

1) ಫಿರ್ಯಾಧಿದಾರರ ದಾಖಲಾತಿ ಹಾಗೂ ಸಾಕ್ಷಿದಾರರ ಹೇಳಿಕೆಗಳು ಸಕರಾತ್ಮಕವಾಗಿದ್ದು ವಾಹನವು ಅರಣ್ಯ ಅಪರಾಧ ಪ್ರಕರಣದಲ್ಲಿ ಭಾಗಿಯಾಗಿರುವುದು ಧೃಢಪಟ್ಟಿರುತ್ತದೆ. 2) ಅರ್ಜಿದಾರರು ಹಾಗೂ ಅವರ ಪರ ವಕೀಲರುಗಳು ಗೈರುಹಾಜರಿಯು ಅರಣ್ಯ ಅಪರಾಧ ಪ್ರಕರಣದಲ್ಲಿ ವಾಹನ ಟ್ರಾಕ್ಟರ್ ಭಾಗಿಯಾಗಿದೆ ಎಂದು ಧೃಢಪಟ್ಟಿರುವುದಕ್ಕೆ ಖಾತರಿಯಾಗಿದ್ದು ನಕರಾತ್ಮಕವಾಗಿರುತ್ತದೆ. ಆದ್ದರಿಂದ ಈ ಎಲ್ಲಾ ಅಂಶಗಳನ್ನು ಗುಣಾತ್ಮಕವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿರುತ್ತೇನೆ.

**"ಆದೇಶ"**

ಕೆ.ಹೆಚ್.ವಿನಯ್‌ಕುಮಾರ್ ಭಾ.ಅ.ಸೇ., ಅಧಿಕಾರಿಯುತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಮಂಡ್ಯ ವಿಭಾಗ, ಮಂಡ್ಯ ಆದ ನಾನು ಅರಣ್ಯ ಅಪರಾಧ ಕೃತ್ಯದಲ್ಲಿ ಭಾಗಿಯಾಗಿರುವ ಟ್ರಾಕ್ಟರ್ ಕೆ.ಎ–11/ಟಿ–3722, ಮತ್ತು ಟ್ರೈಲರ್ ಕೆ.ಎ–11/ಟಿ–3723ನ್ನು ಮತ್ತು ಪ್ರಕರಣದಲ್ಲಿ ಜಪ್ತಿಯಾದ 27 ಮೂಟೆ ಪರಿವರ್ತನೆಯಾದ ಕಗ್ಗಲಿ ತುಂಡುಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ಮಾಡಿರುತ್ತೇನೆ. ಇಂದಿನಿಂದ 30 ದಿನಗಳ ಕಾಲ ಸದರಿ ಆದೇಶದ ವಿರುದ್ಧ ಮೇಲ್ಮನವಿ ಸಲ್ಲಿಸಲು ಕಾಲಾವಕಾಶವಿದ್ದು, ನಂತರದಲ್ಲಿ ಈ ಆದೇಶವು ಜಾರಿಗೆ ಬರುತ್ತದೆ.

ಈ ಆದೇಶವನ್ನು ಇಂದು ದಿನಾಂಕ:21/05/2010ರಂದು ತೆರೆದ ನ್ಯಾಯಾಲಯದಲ್ಲಿ ನನ್ನ ಸಹಿಯೊಂದಿಗೆ ಉದ್ಘೋಷಿಸಿರುತ್ತೇನೆ.

ಅಧಿಕಾರಿಯುತ ಅಧಿಕಾರಿ ಹಾಗೂ,
ಉಪ ಅರಣ್ಯ ಸಂರಕ್ಷಣಾಧಿಕಾರಿ,
ಮಂಡ್ಯ ವಿಭಾಗ, ಮಂಡ್ಯ.

ಪಿ.ಆರ್.1115

**ಅಧಿಕಾರಿಯುತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳವರ ನ್ಯಾಯಾಲಯ**
**ಮಂಡ್ಯ ವಿಭಾಗ, ಮಂಡ್ಯ**
**ಅರಣ್ಯ ಮೊಕದ್ದಮೆ ಸಂಖ್ಯೆ:01/06–07, ದಿನಾಂಕ:16ನೇ ಏಪ್ರಿಲ್, 2010**

**ಉಪಸ್ಥಿತಿ:** ಕೆ.ಹೆಚ್.ವಿನಯ್‌ಕುಮಾರ್, ಭಾ.ಅ.ಸೇ,. ಅಧಿಕಾರಿಯುತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಮಂಡ್ಯ ವಿಭಾಗ, ಮಂಡ್ಯ.

| **ಫಿರ್ಯಾಧಿದಾರರು** | **ವಿರುದ್ಧ** | **ವಾಹನ ಮಾಲೀಕರು** |
|---|---|---|
| ಟಿ.ಡಿ.ರಾಜು,,<br>ಆರಕ್ಷಕ ಉಪ ನಿರೀಕ್ಷಕರು,<br>ಬೆಳ್ಳೂರು ಆರಕ್ಷಕ ಠಾಣೆ, ಬೆಳ್ಳೂರು ನಾಗಮಂಗಲ. | | ಮೋಹನ್ ಬಿನ್ ವಾಸ್<br>ಮಂಚೇಗೌಡನಹಳ್ಳಿ, ಗುಲ್ಬನ್ ಪೇಟೆ<br>ಚಿಕ್ಕಮಗಳೂರು. |
| **ಫಿರ್ಯಾಧಿದಾರರ ಪರ ವಕೀಲರು** | | **ಅರ್ಜಿದಾರರ ಪರ ವಕೀಲರು** |
| ಶಿವಣ್ಣ,<br>ಸಹಾಯಕ ಸರ್ಕಾರಿ ಅಭಿಯೋಜಕ ನಿರ್ದೇಶಕರು,<br>ಮಂಡ್ಯ. | | ಹಾಜರಾಗಿರುವುದಿಲ್ಲ. |

**ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 71ಎ ಮೇರೆಗೆ ಸರ್ಕಾರಕ್ಕೆ ಮುಟ್ಟುಗೋಲು ಪ್ರಕರಣ**

**1. ಪ್ರಕರಣದ ಹಿನ್ನಲೆ:**

ನಾಗಮಂಗಲ ತಾಲ್ಲೂಕು, ಬೆಳ್ಳೂರು ಆರಕ್ಷಕ ಠಾಣೆ ಸರಹದ್ದಿನ ಬೆಳ್ಳೂರು ಕ್ರಾಸ್ ಬಳಿಯ ವೀರವೈಷ್ಣವಿ ನದಿ ಸೇತುವೆ ಬಳಿ ದಿನಾಂಕ:14/05/06ರಂದು ಟಾಟಾ–407 ಟೆಂಪೋ ಕೆ.ಎ–15/1200ರ ವಾಹನದಲ್ಲಿ ಅಕ್ರಮವಾಗಿ 20 ತೇಗ, 9 ನಂದಿ, 6 ಹೊನ್ನೆ ದಿಮ್ಮಿಗಳನ್ನು ಸಾಗಿಸುತ್ತಿದ್ದಾಗ ಬೆಳ್ಳೂರು ಆರಕ್ಷಕರು ಪತ್ತೆ ಹಚ್ಚಿ ಠಾಣಾ ಮೊಕದ್ದಮೆ ಸಂಖ್ಯೆ:71/06ರಲ್ಲಿ ಐಪಿಸಿ ಕಲಂ 379ರ ಮೇರೆಗೆ ಅರಣ್ಯ ಅಪರಾಧ ಪ್ರಕರಣವನ್ನು ದಾಖಲಿಸಿಕೊಂಡು ನಾಗಮಂಗಲ ನ್ಯಾಯಾಲಯದಲ್ಲಿ ಫಿರ್ಯಾಧಿ ಸಲ್ಲಿಸಿ ಸ್ವತ್ತುಗಳಾದ ವಾಹನ ಟಾಟಾ–407 ಟೆಂಪೋ ಕೆ.ಎ–15/1200 ಹಾಗೂ ಮರದ ದಿಮ್ಮಿಗಳನ್ನು ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 71ಎ ಮೇರೆಗೆ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಈ ನ್ಯಾಯಾಲಯಕ್ಕೆ ದಿನಾಂಕ:24/06/06 ರಂದು ಒಪ್ಪಿಸಿರುತ್ತಾರೆ. ಈ ಕಛೇರಿಯಲ್ಲಿ ಅರಣ್ಯ ಮೊಕದ್ದಮೆ ಸಂಖ್ಯೆ:1/2006–07ರಲ್ಲಿ ನೊಂದಾಯಿತಗೊಂಡಿರುತ್ತದೆ. ಚಿಕ್ಕಮಗಳೂರು ಪ್ರಾದೇಶಿಕ ಅಧಿಕಾರಿಯವರು ನೀಡಿದ ಬಿ.ರಿಜಿಸ್ಟರ್ ಎಕ್ಸ್‌ಟ್ರಾಕ್ಟ್ ಪತ್ರದಲ್ಲಿನ ಮಾಹಿತಿಯ ಮೇರೆಗೆ ವಾಹನ ಮಾಲೀಕರ ವಿಳಾಸ ಪತ್ತೆ ಹಚ್ಚಿ ಮಾಲೀಕರಾಗಿ ತಿಳಿದುಬಂದ ಮೋಹನ್ ಬಿನ್ ವಾಸು, ಮಂಚೇಗೌಡನಹಳ್ಳಿ, ಗುಲ್ಲನ್ ಪೇಟೆ ಅಂಚೆ, ಚಿಕ್ಕಮಗಳೂರು ಇವರಿಗೆ ನೊಂದಾಯಿತ ಅಂಚೆ ಮೂಲಕ ನೋಟೀಸ್ ಕಳುಹಿಸಲಾಗಿದ್ದು, ಸದರಿ ನೋಟೀಸ್‌ಗಳು ತಿರಸ್ಕೃತವಾಗಿ ವಾಪಸ್ ಬಂದಿರುತ್ತವೆ.

ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 62ರ ಮೇರೆಗೆ ವಶಪಡಿಸಿಕೊಂಡಿರುವ ಸ್ವತ್ತುಗಳು ಅಕ್ರಮ ಸಾಗಾಣಿಕೆಗೆ ಸೇರಿರುವುದರಿಂದ ಸೆಕ್ಷನ್ 71ಎ ಮೇರೆಗೆ ಏಕೆ ಕ್ರಮಕೈಗೊಳ್ಳಬಾರದು ಎಂಬ ವಿಚಾರದಲ್ಲಿ ಪುನಃ ನೋಟೀಸ್ ಜಾರಿ ಮಾಡಿ ಷರತ್ತಿನೊಂದಿಗೆ ದಿನಪತ್ರಿಕೆಯಲ್ಲಿ ಹಾಗೂ ಕರ್ನಾಟಕ ಗೆಜೆಟ್‌ನಲ್ಲಿ ಪ್ರಕಟಣೆ ಹೊರಡಿಸಲು ದಿನಾಂಕ:26/06/09 ಕೋರಲಾಗಿತ್ತು. ಇದರಂತೆ ದಿನಾಂಕ:02/07/09ರ ಕರ್ನಾಟಕ ಗೆಜೆಟ್ ಭಾಗ 6ಎ ಪುಟಸಂಖ್ಯೆ 1666ರಲ್ಲಿ ಪ್ರಕಟಣೆಗೊಂಡಿರುತ್ತದೆ. ಆದರೂ ಮಾಲೀಕರಾಗಲೀ, ಬೇರೆ ಸಂಬಂಧಿಸಿದ ಯಾರೇ ಆಗಲಿ ವಾಹನ ಬಗ್ಗೆ ತಮ್ಮ ಯಾವುದೇ ಅರ್ಜಿ ಸಲ್ಲಿಸಿರುವುದಿಲ್ಲ.

ಆರಕ್ಷಕ ಠಾಣಾಧಿಕಾರಿಗಳವರ ವಿಚಾರಣೆ ಮೇರೆಗೆ ವಾಹನ ಮಾಲೀಕರು ಬೇರೊಂದು ಅಪರಾಧ ಪ್ರಕರಣದಲ್ಲಿ ಬಂಧನದಲ್ಲಿರುವುದಾಗಿ ತಿಳಿದುಬಂದಿದ್ದು, ವಿಚಾರಣೆ ಕೈಗೆತ್ತಿಕೊಳ್ಳಲಾಯಿತು.

**ವಿಚಾರಣೆ:**

ದಿನಾಂಕ:19/06/09ರಿಂದ ಇದುವರೆವಿಗೂ ವಿವಿಧ ಹಂತಗಳಲ್ಲಿ ವಿಚಾರಣೆಯನ್ನು ನಡೆಸಲಾಗಿದೆ. ಫಿರ್ಯಾಧಿದಾರರ ಪರ ಸಹಾಯಕ ಅಭಿಯೋಜಕ ನಿರ್ದೇಶಕರು ಫಿರ್ಯಾಧಿದಾರ ಸಾಕ್ಷಿ ಹೇಳಿಕೆಯನ್ನು ನಡೆಸಿಕೊಟ್ಟಿರುತ್ತಾರೆ. ಫಿರ್ಯಾಧಿದಾರರಾದ ಪಿಡಬ್ಲ್ಯು–1ರಲ್ಲಿ ಸಾಕ್ಷಿ ನುಡಿಯುತ್ತಾ ನಾನು ದಿನಾಂಕ:19/05/05 ರಿಂದ 17/03/07ರವರೆಗೆ ಬೆಳ್ಳೂರು ಪೋಲಿಸ್ ಠಾಣೆಯಲ್ಲಿ ಆರಕ್ಷಕ ಉಪ ನಿರೀಕ್ಷಕನಾಗಿ ಕರ್ತವ್ಯ ನಿರ್ವಹಿಸಿರುತ್ತೇನೆ. ದಿನಾಂಕ:14/05/06 ರಂದು ಬೆಳ್ಳೂರು ಕ್ರಾಸ್ ಹತ್ತಿರ ಇರುವ ಶ್ರೀ ವೀರ ವೈಷ್ಣವಿ ಸೇತುವೆ ಬಳಿ ಒಂದು ಟಾಟಾ –407 ವಾಹನ ನಿಂತಿದುದು ತಿಳಿದುಬಂದ ನಂತರ ಅದನ್ನು ಪರಿಶೀಲಿಸಲಾಗಿ ಆ ವಾಹನದ ಸಂಖ್ಯೆ:ಕೆ.ಎ.15/1200 ವಾಹನವಾಗಿದ್ದು ಸದರಿ ವಾಹನದಲ್ಲಿ ವಿವಿಧ ಅಳತೆಯ 35 ಮರದ ತುಂಡುಗಳಿದ್ದುದು ಕಂಡುಬಂದಿತು ಅದರ ಜೊತೆಯಲ್ಲಿ 9 ಗೋಣಿ ಚೀಲಗಳಲ್ಲಿ ಸುಂಟಿ ತುಂಬಿದುದು ಕಂಡುಬಂದಿತು. ಸ್ಥಳದಲ್ಲಿ ಪರಿಶೀಲಿಸಲಾಗಿ ವಾಹನಕ್ಕೆ ಮತ್ತು ವಾಹನದಲ್ಲಿದ್ದ ಮರದ ತುಂಡುಗಳಿಗೆ ಸಂಬಂಧಪಟ್ಟಂತೆ ಯಾವುದೇ ವಾರಸುದಾರರು ಸ್ಥಳದಲ್ಲಿ ಇಲ್ಲದಿದುದು ತಿಳಿದುಬಂದಾಗ ವಾಹನದಲ್ಲಿದ್ದ ಮರದ ತುಂಡುಗಳು ಹಾಗೂ ಸುಂಟಿ ತುಂಬಿದ್ದ ಚೀಲಗಳನ್ನು ಸ್ಥಳದಲ್ಲಿ ಇದ್ದ ಸಿಬ್ಬಂದಿಯವರು ಹಾಗೂ ಪಂಚರಾದ ರಮೇಶ್ ಮತ್ತು ಎನ್.ಎಲ್.ರಂಗಪ್ಪರವರ ಸಮಕ್ಷಮ ಮಹಜರ್ ಬರೆದು ಅಮಾನತ್ತುಪಡಿಸಿಕೊಂಡಿರುತ್ತೇನೆ. ಸ್ಥಳದಲ್ಲಿ ಬರೆದ ಮಹಜರ್ ನಿಶಾನೆ ಪಿ–1 ಎಂದು ಹಾಗೂ ಸಾಕ್ಷಿ ಸಹಿಯನ್ನು ನಿಶಾನೆ ಪಿ1ಎ ಎಂದು ಗುರುತಿಸಲಾಯಿತು. ನಂತರ ಠಾಣೆಗೆ ಬಂದು ಸಿಮಿಸ್ 62/2006ರಲ್ಲಿ ಮೊಕದ್ದಮೆಯನ್ನು ದಾಖಲು ಮಾಡಿಕೊಂಡು ವಶಪಡಿಸಿಕೊಂಡಿರುವ ಮಾಲುಗಳನ್ನು ಮಾಲುಪಟ್ಟಿ ಸಂಖ್ಯೆ:44/2006ರಲ್ಲಿ ನಮೂದಿಸಿ, ನ್ಯಾಯಾಲಯಕ್ಕೆ ವರದಿ ಸಲ್ಲಿಸಿರುತ್ತೇನೆ. ಸಿಮಿಸ್‌ನ ನೊಂದಾಯಿತ ಸಂಖ್ಯೆ:62/2006 ದಾಖಲೆಯನ್ನು ನಿಶಾನೆ ಪಿ–2 ಎಂದು ಹಾಗೂ ಸಾಕ್ಷಿ ಸಹಿಯನ್ನು ನಿಶಾನೆ ಪಿ–2ಎ ಎಂದು ಗುರುತಿಸಲಾಯಿತು. ಮಾಲು ಫಾರಂ ಸಂಖ್ಯೆ:44/2006 ದಾಖಲೆಯನ್ನು ನಿಶಾನೆ ಪಿ–3 ಎಂದು ಸಾಕ್ಷಿ ಸಹಿಯನ್ನು ನಿಶಾನೆ ಪಿ–3ಎ ಎಂದು ಗುರುತಿಸಲಾಯಿತು.

ನಂತರ ವಲಯ ಅರಣ್ಯಾಧಿಕಾರಿ, ನಾಗಮಂಗಲರವರಿಗೆ ದಿನಾಂಕ:16/05/2006ರಂದು ಅಮಾನತ್ತುಪಡಿಸಿರುವ ಮರದ ತುಂಡುಗಳ ಹಾಗೂ ಸುಂಟಿಗಳನ್ನು ಪರಿಶೀಲಿಸಿ ಮರಗಳನ್ನು ಗುರುತಿಸಿ ಹಾಗೂ ಮೌಲ್ಯವನ್ನು ನಿರ್ಧರಿಸಿಕೊಡಬೇಕೆಂದು ವರದಿ ನೀಡಬೇಕೆಂದು ಮನವಿ ಸಲ್ಲಿಸಿರುತ್ತೇನೆ. ಸದರಿ ಮನವಿ ಪತ್ರವನ್ನು ನಿಶಾನೆ ಪಿ–4 ಎಂದು ಸಾಕ್ಷಿ ಸಹಿಯನ್ನು ನಿಶಾನೆ ಪಿ–4ಎ ಎಂದು ಗುರುತಿಸಲಾಯಿತು. ಅದೇ ದಿನದಂದು ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಗೆ ವಾಹನದ ಮಾಲೀಕರ ಬಗ್ಗೆ ಮಾಹಿತಿ ನೀಡಬೇಕೆಂದು ಕೇಳಿಕೊಂಡಿರುತ್ತೇನೆ. ದಿನಾಂಕ:23/06/2006ರಂದು ವಲಯ ಅರಣ್ಯಾಧಿಕಾರಿಯವರಿಂದ ಮೌಲ್ಯ ನಿರ್ಧರಿಸಿದ ಬಗ್ಗೆ ಒಂದು ಪತ್ರ ಬಂದಿರುತ್ತದೆ. ಸದರಿ ಪತ್ರವನ್ನು ನಿಶಾನೆ ಪಿ–5 ಎಂದು ಅದರಲ್ಲಿರುವ ಸಾಕ್ಷಿ ಸಹಿಯನ್ನು ನಿಶಾನೆ ಪಿ–5ಎ ಎಂದು ಗುರುತಿಸಲಾಯಿತು. ನಿಶಾನೆ ಪಿ–5ರಲ್ಲಿರುವ ವಿಚಾರಗಳನ್ನು ಪರಿಶೀಲಿಸಲಾಗಿ ಅಮಾನತ್ತುಪಡಿಸಲಾಗಿರುವ ಮರದ ತುಂಡುಗಳಲ್ಲಿ 21 ತೇಗದ ತುಂಡು, 8 ನಂದಿ ತುಂಡುಗಳು ಮತ್ತು 6 ಹೊನ್ನೆ ಮರದ ತುಂಡುಗಳಾಗಿರುತ್ತವೆ ಎಂದು ತಿಳಿದುಬಂದಿರುತ್ತದೆ. ಇದರ ಮೇರೆಗೆ ದಿನಾಂಕ:23/06/2006 ರಂದು ನನ್ನ ಸ್ವಂತ ವರದಿಯ ಆಧಾರದ ಮೇಲೆ ಅಪರಾಧ ಸಂಖ್ಯೆ:71/2006ರಲ್ಲಿ ಮೊಕದ್ದಮೆಯನ್ನು ನೊಂದಾಯಿಸಿ ಘನ ನ್ಯಾಯಾಲಯಕ್ಕೆ ಹಾಗೂ ನಮ್ಮ ಇಲಾಖೆಯ ಮೇಲಾಧಿಕಾರಿಗಳಿಗೆ ಸಲ್ಲಿಸಿರುತ್ತೇನೆ. ಪ್ರಥಮ ವರ್ತಮಾನದ ವರದಿಯನ್ನು ನಿಶಾನೆ ಪಿ–6 ಎಂದು ಅದರಲ್ಲಿರುವ ಸಾಕ್ಷಿ ಸಹಿಯನ್ನು ನಿಶಾನೆ ಪಿ–6ಎ ಎಂದು ಗುರುತಿಸಲಾಯಿತು. ಪ್ರಥಮ ವರ್ತಮಾನ ವರದಿಯ ಜೊತೆಯಲ್ಲಿ ವಲಯ ಅರಣ್ಯಾಧಿಕಾರಿಗಳು ನೀಡಿರುವ ವರದಿಯನ್ನು ಸಹ ನ್ಯಾಯಾಲಯಕ್ಕೆ ಸಲ್ಲಿಸಿರುತ್ತೇನೆ. ದಿನಾಂಕ:26/06/2006ರಂದು ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಂದ ವಾಹನದ ಬಿ ರಿಜಿಸ್ಟರ್ ಎಕ್ಸ್‌ಟ್ರಾಕ್ಟ್ ಪಡೆದುಕೊಂಡಿರುತ್ತೇನೆ. ಸದರಿ ದಾಖಲೆಯನ್ನು ನಿಶಾನೆ ಪಿ–7ಎಂದು ಸಾಕ್ಷಿ ಸಹಿಯನ್ನು ಪಿ–7ಎ ಎಂದು ಗುರುತಿಸಲಾಯಿತು. ನಿಶಾನೆ ಪಿ–7ರಲ್ಲಿರುವ ಮಾಹಿತಿ ಪ್ರಕಾರ ವಾಹನದ ಮಾಲೀಕರು ಮೋಹನ ಬಿನ್ ವಾಸು, ಮಾಚೇಗೌಡನಹಳ್ಳಿ, ಗುಳ್ಳನಪೇಟೆ, ಚಿಕ್ಕಮಗಳೂರು ಜಿಲ್ಲೆ ಎಂದು ತಿಳಿದುಬಂದಿರುತ್ತದೆ. ಮೊಕದ್ದಮೆಗೆ ಸಂಬಂಧಪಟ್ಟಂತೆ ವಾಹನದ ಮಾಲೀಕರಾದ ಮೋಹನ್‌ರನ್ನು ಆರೋಪಿಯನ್ನಾಗಿ ಪರಿಗಣಿಸಿ ಆತನನ್ನು ಪತ್ತೆ ಹಚ್ಚಲು ಸಿಬ್ಬಂದಿಯನ್ನು ನೇಮಿಸಲಾಗಿತ್ತು. ನಮ್ಮ ಸಿಬ್ಬಂದಿಗಳು ನೀಡಿದ ವರದಿಯ ಪ್ರಕಾರ ಸದರಿ ಆರೋಪಿಯು ಆಲದೂರು ಪೋಲಿಸ್ ಠಾಣೆಯ ಸಿ.ಸಿ.ನಂ:3628/93ರ ಪ್ರಕರಣದಲ್ಲಿ ನ್ಯಾಯಾಂಗ ಬಂಧನದಲ್ಲಿರುವುದು ತಿಳಿದುಬಂದಿತು.

ದಿನಾಂಕ:17/03/2007ರಂದು ನನಗೆ ವರ್ಗಾವಣೆಯಾದುದರಿಂದ ಮೊಕದ್ದಮೆ ಕಡತವನ್ನು ಪಿಎಸ್‌ಐ ಶ್ರೀಧರ್‌ರವರು ವಹಿಸಿಕೊಂಡಿರುತ್ತಾರೆ.

ವಾಹನದ ಮಾಲೀಕರು ಹಾಜರಾಗದೇ ಇರುವುದರಿಂದ ಪಾಟೀಸವಾಲು ಇಲ್ಲವೆಂದು ತೆಗೆದುಕೊಳ್ಳಲಾಯಿತು.

**ಪರಿಶೀಲನೆ:**

ಫಿರ್ಯಾಧಿದಾರರು ಅಪರಾಧ ಪ್ರಕರಣದಲ್ಲಿ ಸಲ್ಲಿಸಲಾದ ದಾಖಲಾತಿಗಳು ಫಿರ್ಯಾಧಿದಾರರು ನೀಡಿದ ಸಾಕ್ಷಿ ಹೇಳಿಕೆ ಗುರುತಿಸಲಾದ ನಿಶಾನೆಗಳನ್ನು ಪರಿಶೀಲಿಸಲಾಗಿದೆ ಜಪ್ತಿ ಮಾಡಲಾದ ವಾಹನದಲ್ಲಿ ಅಕ್ರಮವಾಗಿ 20 ತೇಗದ ತುಂಡುಗಳು, 9 ನಂದಿ ತುಂಡುಗಳು ಹಾಗೂ 6 ಹೊನ್ನೆತುಂಡುಗಳನ್ನು ಸಾಗಿಸುತ್ತಿರುವುದು ಧೃಡೀಕರಿಸಿದೆ. ಪ್ರಕರಣದಲ್ಲಿ ಆರೋಪಿಗಳು ಸಹ ಯಾರು ಇರುವುದಿಲ್ಲ. ವಾಹನ ಮಾಲೀಕರೆಂದು ತಿಳಿದು ಬಂದವರು ಸಹ ವಾಹನ ಮಾಲೀಕತ್ವದ ಬಗ್ಗೆ ತಾವಾಗಲೀ, ತಮ್ಮ ಪರವಾದ ಬೇರೊಬ್ಬ ಯಾರೇ ಆಗಲೀ ಹಾಜರಾಗಿ ಹೇಳಿಕೆ ನೀಡಿರುವುದಿಲ್ಲ ಕಳುಹಿಸಲಾದ ಅಂಚೆ ದಾಖಲಾತಿಗಳ ಷರದೊಂದಿಗೆ ಹಿಂದಿರುಗಿ ಬಂದಿರುತ್ತವೆ ಪ್ರಕರಣದ ಪರಿಶೀಲನೆಯಲ್ಲಿ ಈ ಕೆಳಕಂಡ ಅಂಶಗಳು ಮೂಡಿ ಬರುತ್ತವೆ.

1. ಫಿರ್ಯಾಧಿದಾರರು ವಾಹನವು ಅರಣ್ಯ ಅಪರಾಧ ಪ್ರಕರಣದಲ್ಲಿ ಭಾಗಿಯಾಗಿರುವುದನ್ನು ಸಾಭೀತುಪಡಿಸಿದ್ದಾರೆಯೇ ?
2. ವಾಹನ ಮಾಲೀಕರು ವಾಹನವು ತಮ್ಮ ಅರಿವಿಗೆ ಬಾರದೇ ಈ ಅರಣ್ಯ ಅಪರಾಧ ಕೃತ್ಯದಲ್ಲಿ ಸಿಲುಕಿರುವುದನ್ನು ಸಾಭೀತು ಪಡಿಸಿದ್ದಾರೆಯೇ.
3. ಈ ಅಪರಾಧ ಪ್ರಕರಣದ ಬಗ್ಗೆ ಕೈಗೊಂಡ ತೀರ್ಮಾನ ಏನು ?

ಫಿರ್ಯಾಧಿದಾರರು ವಾಹನವು ಅರಣ್ಯ ಅಪರಾಧ ಪ್ರಕರಣದಲ್ಲಿ ಭಾಗಿಯಾಗಿರುವುದನ್ನು ದಾಖಲಾತಿಗಳಲ್ಲಿ ಗುರುತಿಸಲಾದ ನಿಶಾನೆಗಳಲ್ಲಿ ಹಾಗೂ ತಮ್ಮ ಹೇಳಿಕೆಯಲ್ಲಿ ಧೃಢೀಕರಿಸಿ ಸಾಭೀತುಪಡಿಸಿರುತ್ತಾರೆ.

ವಾಹನ ಮಾಲೀಕರಾಗಲೀ ಅಥವಾ ಅವರಿಂದ ಅಧಿಕಾರಪಡೆದವರಾಗಲೀ ಯಾರು ಸಹ ಹಾಜರಾಗಿರುವುದಿಲ್ಲ. ವಾಹನವು ಅಪರಾಧ ಕೃತ್ಯದಲ್ಲಿ ಭಾಗಿಯಾಗಿರುವುದು ಮೇಲ್ನೋಟಕ್ಕೆ ಕಂಡುಬರುತ್ತದೆ.

ಈ ಎಲ್ಲಾ ಅಂಶಗಳನ್ನು ತುಲನಾತ್ಮಕವಾಗಿ ಪರಿಶೀಲಿಸಲಾಗಿದ್ದು ಈ ಕೆಳಕಂಡ ನಿರ್ಣಯಕ್ಕೆ ಬರಲಾಗಿದೆ.

1. "ಸಕಾರಾತ್ಮಕ"
2. "ನಕಾರಾತ್ಮಕ"
3. "ಆದೇಶ"

ಫಿರ್ಯಾಧಿದಾರರ ದಾಖಲಾತಿಗಳು ವಿಚಾರಣೆಯಲ್ಲಿ ಕೈಗೊಂಡ ಕ್ರಮಗಳು ಫಿರ್ಯಾಧಿದಾರರ ಸಾಕ್ಷಿ ಹೇಳಿಕೆ ಗುರುತಿಸಲಾದ 7 ದಾಖಲಾತಿ ನಿಶಾನೆ ಗುರುತುಗಳ ಮೇರೆಗೆ ವಾಹನ ಕೆ.ಎ.15/1200ರಲ್ಲಿ ಅಕ್ರಮವಾಗಿ ಅರಣ್ಯೋತ್ಪನ್ನವನ್ನು ಸಾಗಿಸುತ್ತಿರುವುದು ಧೃಢಪಟ್ಟಿದ್ದು ಈ ಕೆಳಕಂಡಂತೆ ಆದೇಶಿಸಿರುತ್ತೇನೆ.

**"ಆದೇಶ"**

ಕೆ.ಹೆಚ್.ವಿನಯ್‌ಕುಮಾರ್ ಭಾ.ಅ.ಸೇ., ಅಧಿಕಾರಿಯುತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಮಂಡ್ಯ ವಿಭಾಗ, ಮಂಡ್ಯ ಆದ ನಾನು ಅರಣ್ಯ ಅಪರಾಧ ಪ್ರಕರಣದಲ್ಲಿ ವಾಹನ ಸಂಖ್ಯೆ: ಕೆ.ಎ.15/1200 ಭಾಗಿಯಾಗಿರುವುದು ಸಾಭೀತಾಗಿದ್ದು, ಪ್ರಕರಣದಲ್ಲಿ ವಶಪಡಿಸಿಕೊಂಡ 20 ತೇಗ, 9 ನಂದಿ, 6 ಹೊನ್ನೆ ಮರದ ದಿಮ್ಮಿಗಳನ್ನು ಹಾಗೂ ಸಾಗಾಣಿಕೆಯಲ್ಲಿ ಭಾಗಿಯಾಗಿದ್ದ ಟೆಂಪೋ ಕೆ.ಎ–15/1200ನ್ನು ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 71ಎ ಮೇರೆಗೆ ದತ್ತವಾದ ಅಧಿಕಾರ ಚಲಾಯಿಸಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಆದೇಶಿಸಿರುತ್ತೇನೆ. ಈ ಆದೇಶವು ಇಂದಿನಿಂದ 30 ದಿನಗಳವರೆಗೆ ಮೇಲ್ಮನವಿ ಸಲ್ಲಿಸಲು ಅವಕಾಶ ನೀಡಿ ನಂತರ ಈ ಆದೇಶ ಜಾರಿಗೆ ಬರಲಿದೆ.

ಈ ಆದೇಶವನ್ನು ಇಂದು ದಿನಾಂಕ:16/04/2010ರಂದು ತೆರೆದ ನ್ಯಾಯಾಲಯದಲ್ಲಿ ನನ್ನ ಸಹಿಯೊಂದಿಗೆ ಉದ್ಘೋಷಿಸಿರುತ್ತೇನೆ.

ಅಧಿಕಾರಿಯುತ ಅಧಿಕಾರಿ ಹಾಗೂ,
ಉಪ ಅರಣ್ಯ ಸಂರಕ್ಷಣಾಧಿಕಾರಿ,
ಮಂಡ್ಯ ವಿಭಾಗ, ಮಂಡ್ಯ.

ಪಿ.ಆರ್.1116

**ಜಿಲ್ಲಾ ಅಧಿಕಾರಿಗಳ ಕಛೇರಿ, ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆ, ಗದಗ**

**ಪ್ರಕಟಣೆ**

**ಸಂಖ್ಯೆ: ಬಿಸಿಎಂ/ಕಾಪ/ಸಿಆರ್6/2010–11, ದಿನಾಂಕ:25ನೇ ಜುಲೈ, 2010**

**ವಿಷಯ:** 2010–11ನೇ ಸಾಲಿನಲ್ಲಿ ಹಿಂದುಳಿದ ವರ್ಗಗಳ ಕಾನೂನು ಪದವೀಧರರಿಗೆ ತರಬೇತಿಗಾಗಿ ಆಯ್ಕೆ ಮಾಡುವ ಕುರಿತು.

2010–11ನೇ ಸಾಲಿಗೆ ಜಿಲ್ಲೆಗೆ ಸರ್ಕಾರದ ಆದೇಶ ಸಂಖ್ಯೆ:ಸ.ಕ.ಇ.446/ಬಿಎಂಎಸ್ 2005ರ ಬೆಂಗಳೂರು–1 ದಿನಾಂಕ:01.12.2005ರ ಪ್ರಕಾರ ಹಿಂದುಳಿದ ವರ್ಗಗಳ ಕಾನೂನು ಪದವೀಧರರಿಗೆ ಈ ಇಲಾಖೆಯಿಂದ ತರಬೇತಿಗೆ ಆಯ್ಕೆ ಮಾಡಬೇಕಾಗಿದ್ದು ಅರ್ಹ ಅಭ್ಯರ್ಥಿಗಳಿಂದ ಅರ್ಜಿ ಆಹ್ವಾನಿಸಲಾಗಿದೆ. ಆಸಕ್ತ ಹಾಗೂ ಅರ್ಹ ಹಿಂದುಳಿದ ವರ್ಗಗಳ ಕಾನೂನು ಪದವೀಧರರಿಗೆ ಈ ಕೆಳಕಂಡ ನಿಬಂಧನೆಗೆ ಒಳಪಟ್ಟು ಭರ್ತಿ ಮಾಡಿದ ಅರ್ಜಿಗಳನ್ನು ಗದಗ ಜಿಲ್ಲಾ ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಕಲ್ಯಾಣ ಅಧಿಕಾರಿಗಳಿಗೆ ದಿನಾಂಕ:14.08.2010ರಂದು ಸಾಯಂಕಾಲ 5.00 ಗಂಟೆಯೊಳಗಾಗಿ ಅರ್ಜಿ ಸಲ್ಲಿಸಬಹುದಾಗಿದೆ. ಅವಧಿ ಮೀರಿ ಬಂದ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ.

**ಅರ್ಹತೆ:**

1) ತರಬೇತಿಯನ್ನು ಗದಗ ಜಿಲ್ಲೆಯಲ್ಲಿಯೇ ನೀಡಲಾಗುವುದು.

2) ಅಭ್ಯರ್ಥಿಗಳು ಗದಗ ಜಿಲ್ಲೆಯವರಾಗಿರಬೇಕು.

3) ಗದಗ ಜಿಲ್ಲೆಯ ಒಟ್ಟು 10 ಅಭ್ಯರ್ಥಿಗಳನ್ನು ತರಬೇತಿಗೆ ಆಯ್ಕೆ ಮಾಡಲಾಗುವುದು.

4) ಸರ್ಕಾರದ ಆದೇಶ ಸಂಖ್ಯೆ:ಎಸ್.ಡಬ್ಲ್ಯೂಡಿ 126/ಬಿಸಿಎ/ದಿನಾಂಕ:13.02.2003ಕ್ಕೆ ಸಂಬಂಧಿಸಿದ ಪ್ರಕಾರವರ್ಗ–1, 2ಎ, 3ಎ, 3ಬಿ ವರ್ಗಗಳಿಗೆ ಸೇರಿದ ಅಭ್ಯರ್ಥಿಗಳಾಗಿರಬೇಕು.

5) ಪ್ರವರ್ಗ–2ಎ, 3ಎ, 3ಬಿ ಅಭ್ಯರ್ಥಿಗಳಿಗೆ ವಾರ್ಷಿಕ ಆದಾಯ 15,000/– ಒಳಗಿರಬೇಕು.

6) ತರಬೇತಿ ಅವಧಿ 4 ವರ್ಷಗಳಾಗಿದ್ದು, ಆಯ್ಕೆಗೊಂಡ ಅಭ್ಯರ್ಥಿಗಳಿಗೆ ತರಬೇತಿ ಅವಧಿಯಲ್ಲಿ ರೂ.1,000/– ಮಾಹೆಯಂತೆ ತರಬೇತಿ ಭತ್ಯೆ ನೀಡಲಾಗುವುದು.

7) ಅಭ್ಯರ್ಥಿಗಳನ್ನು ಜಿಲ್ಲಾ ಮಟ್ಟದಲ್ಲಿ ಆಯ್ಕೆ ಸಮಿತಿಯಿಂದ ಸಂದರ್ಶನದ ಮೂಲಕ ಆಯ್ಕೆ ಮಾಡಲಾಗುವುದು.

8) ಅಭ್ಯರ್ಥಿಗಳು, ಅರ್ಜಿಯ ಜೊತೆಗೆ ಅವರ ವಯಸ್ಸನ್ನು ದೃಢೀಕರಿಸುವ ಎಸ್.ಎಸ್.ಎಲ್.ಸಿ. ಅಂಕಪಟ್ಟಿ, ಅಥವಾ ಶಾಲಾ ಪ್ರಮಾಣ ಪತ್ರ ಪದವಿ ಹಾಗೂ ಕಾನೂನು ಪದವಿಯಲ್ಲಿ ಪಡೆದ ಅಂಕಪಟ್ಟಿ, ಪ್ರಮಾಣ ಪತ್ರದ ದೃಢೀಕರಣ ಪ್ರತಿಗಳನ್ನು ಲಗತ್ತಿಸಬೇಕು.

9) ಅಭ್ಯರ್ಥಿಗಳು, ವಯಸ್ಸು ಅರ್ಜಿ ಸ್ವೀಕರಿಸುವ ಕೊನೆಯ ದಿನಾಂಕಕ್ಕೆ 30 ವರ್ಷಗಳಿಗೆ ಮೀರಿರಬಾರದು.

10) ಅಭ್ಯರ್ಥಿಯು ಬಾರ್ ಕೌನ್ಸಿಲ್‌ನಲ್ಲಿ ತಮ್ಮ ಹೆಸರನ್ನು ನೊಂದಾಯಿಸಿರಬೇಕು. ಹಾಗೂ ತರಬೇತಿಗೆ ಅರ್ಜಿಯನ್ನು ಸಲ್ಲಿಸಲು ನಿಗದಿಪಡಿಸಿರುವ ಕೊನೆಯ ದಿನಾಂಕಕ್ಕೆ ಹಿಂದೆ 2 ವರ್ಷಗಳೊಳಗಾಗಿ ಕಾನೂನು ಪದವಿಯಲ್ಲಿ ಉತ್ತೀರ್ಣರಾಗಿರಬೇಕು.

11) ಆಯ್ಕೆಯಾದ ಅಭ್ಯರ್ಥಿಗಳನ್ನು ಜಿಲ್ಲಾ ಪಬ್ಲಿಕ್ ಪ್ರಾಸಿಕ್ಯೂಟರ್, ಸರ್ಕಾರಿ ವಕೀಲರು, ಅಥವಾ ಕನಿಷ್ಟ 20 ವರ್ಷಗಳ ವಕೀಲಿ ವೃತ್ತಿಯಲ್ಲಿ ಅನುಭವವುಳ್ಳ ಯಾವುದೇ ವಕೀಲರ ಅಧೀನದಲ್ಲಿ ತರಬೇತಿಗೆ ನಿಯೋಜಿಸಲಾಗುವುದು.

12) ತರಬೇತಿ ಅವಧಿ 4 ವರ್ಷಗಳಾಗಿದ್ದು ತರಬೇತಿಯನ್ನು ಮಧ್ಯದಲ್ಲಿ ಬಿಡಬಾರದು ತರಬೇತಿ ಅವಧಿಯಲ್ಲಿ ರಾಜ್ಯ/ಕೇಂದ್ರ ಸರ್ಕಾರದ ಸೇವೆಗೆ ನೇಮಕವಾದಲ್ಲಿ ಈ ಷರತ್ತು ಅನ್ವಯಿಸುವುದಿಲ್ಲ.

13) ಅಭ್ಯರ್ಥಿಗಳು ಸುಳ್ಳು ದಾಖಲೆ ಸಲ್ಲಿಸಿದ್ದಲ್ಲಿ ಅವರ ವಿರುದ್ಧ ಕಾನೂನು ಪ್ರಕಾರ ಕ್ರಮ ಜರುಗಿಸಲಾಗುವುದು. ಅಲ್ಲದೇ ಅವರಿಗೆ ನೀಡುತ್ತಿರುವ ತರಬೇತಿ ಭತ್ಯೆಯನ್ನು ಶೇ.10% ರಷ್ಟು ಬಡ್ಡಿಯೊಂದಿಗೆ ವಸೂಲು ಮಾಡಲಾಗುವುದು. ಯಾವುದೇ ಹಣ ಬಾಕಿ ಇದ್ದಲ್ಲಿ ಭೂ ಕಂದಾಯದ ಬಾಕಿ ವಸೂಲಿ ಮಾಡುವ ರೀತಿಯಲ್ಲಿ ಹಣ ವಸೂಲು ಮಾಡಲಾಗುವುದು.

14) ಅಪೂರ್ಣವಾದ ಹಾಗೂ ನಿಗದಿಪಡಿಸಿದ ದಿನಾಂಕ ಮೀರಿ ಬಂದ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ.

15) ಪ್ರವರ್ಗ–1ಕ್ಕೆ ಸಂಬಂಧಿಸಿದಂತೆ ಮುಸ್ಲಿಂ, ಪಿಂಜಾರ, ಧರವೇಶ, ಕ್ರಿಶ್ಚಿಯನ್, ಬೌದ್ಧ, ಪಾರ್ಸಿ, ನಧಾಪ ಚಪ್ಪರಬಂದ ಜಾತಿ ಹೊರತುಪಡಿಸಿ (ಉಳಿದ ಜಾತಿ ಅರ್ಜಿ ಸಲ್ಲಿಸಬಹುದು)

ಅರ್ಜಿ ನಮೂನೆ ಹಾಗೂ ಹೆಚ್ಚಿನ ಮಾಹಿತಿಗಾಗಿ ಜಿಲ್ಲಾ ಅಧಿಕಾರಿಗಳು, ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆ, ಜಿಲ್ಲಾ ಆಡಳಿತ ಭವನ, ಕೊಠಡಿ ಸಂಖ್ಯೆ–208, ಹುಬ್ಬಳ್ಳಿ ರೋಡ್ ಗದಗರವರನ್ನು ಕಛೇರಿ ವೇಳೆಯಲ್ಲಿ ಸಂಪರ್ಕಿಸಲು ಕೋರಿದೆ.

ಜಿಲ್ಲಾ ಅಧಿಕಾರಿಗಳು,
ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ
ಕಲ್ಯಾಣ ಇಲಾಖೆ, ಗದಗ ಜಿಲ್ಲೆ, ಗದಗ.

**ಜಿಲ್ಲಾ ಅಧಿಕಾರಿಗಳ ಕಛೇರಿ, ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆ, ಗದಗ**

**ಪ್ರಕಟಣೆ**

**ಸಂಖ್ಯೆ: ಬಿಸಿಎಂ/ಕಾಪ/ಸಿಆರ್7/2010–11, ದಿನಾಂಕ:25ನೇ ಜುಲೈ, 2010**

**ವಿಷಯ:** 2010–11ನೇ ಸಾಲಿನಲ್ಲಿ ಮತೀಯ ಅಲ್ಪಸಂಖ್ಯಾತರ ಕಾನೂನು ಪದವೀಧರರಿಗೆ ತರಬೇತಿಗಾಗಿ ಆಯ್ಕೆ ಮಾಡುವ ಕುರಿತು.

2010–11ನೇ ಸಾಲಿಗೆ ಜಿಲ್ಲೆಗೆ ಸರ್ಕಾರದ ಆದೇಶ ಸಂಖ್ಯೆ:ಸ.ಕ.ಇ./205/ಬಿಎಂಎಸ್ 99ರ ಬೆಂಗಳೂರು ದಿನಾಂಕ:07.10.1999ರ ಪ್ರಕಾರ ಮತೀಯ ಅಲ್ಪಸಂಖ್ಯಾತರ ಕಾನೂನು ಪದವೀಧರರಿಗೆ ಈ ಇಲಾಖೆಯಿಂದ ತರಬೇತಿಗೆ ಆಯ್ಕೆ ಮಾಡಬೇಕಾಗಿದ್ದು ಅರ್ಹ ಅಭ್ಯರ್ಥಿಗಳಿಂದ ಅರ್ಜಿ ಆಹ್ವಾನಿಸಲಾಗಿದೆ. ಆಸಕ್ತ ಹಾಗೂ ಅರ್ಹ ಮತೀಯ ಅಲ್ಪಸಂಖ್ಯಾತರ ಕಾನೂನು ಪದವೀಧರರು ಈ ಕೆಳಕಂಡ ನಿಬಂಧನೆಗೆ ಒಳಪಟ್ಟು ಭರ್ತಿ ಮಾಡಿದ ಅರ್ಜಿಗಳನ್ನು ಗದಗ ಜಿಲ್ಲಾ ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಕಲ್ಯಾಣ ಅಧಿಕಾರಿಗಳಿಗೆ ದಿನಾಂಕ:14.08.2010ರಂದು ಸಾಯಂಕಾಲ 5.00 ಗಂಟೆಯೊಳಗಾಗಿ ಅರ್ಜಿ ಸಲ್ಲಿಸಬಹುದಾಗಿದೆ. ಅವಧಿ ಮೀರಿ ಬಂದ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ.

**ಅರ್ಹತೆ:**

1) ತರಬೇತಿಯನ್ನು ಗದಗ ಜಿಲ್ಲೆಯಲ್ಲಿಯೇ ನೀಡಲಾಗುವುದು.

2) ಅಭ್ಯರ್ಥಿಗಳು ಗದಗ ಜಿಲ್ಲೆಯವರಾಗಿರಬೇಕು.

3) ಗದಗ ಜಿಲ್ಲೆಯ ಒಟ್ಟು 2 ಮತೀಯ ಅಲ್ಪಸಂಖ್ಯಾತರ ಅಭ್ಯರ್ಥಿಗಳಿಗೆ ಆಯ್ಕೆ ಮಾಡಲಾಗುವುದು.

4) ಕಾನೂನು ತರಬೇತಿ ಪಡೆಯುವ ಅಭ್ಯರ್ಥಿಯು ಮುಸ್ಲಿಂ, ಕ್ರಿಶ್ಚಿಯನ್, ಜೈನ್, ಬೌದ್ಧ, ಸಿಖ್ ಮತ್ತು ಪಾರ್ಸಿ ಸಮುದಾಯದವರಾಗಿರಬೇಕು.

